# ಧರ್ಮಕಲ್ಯಾಣ: ಒಂದು ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿರುವ ಕಿರು ಪ್ರಬಂಧ)

ಸಂಶೋಧಕ
**ಗೋಡಿಹಾಳ ಕಾಂತೇಶರೆಡ್ಡಿ ರಾಮರಡ್ಡಿ**

ಮಾರ್ಗದರ್ಶಕರು
**ಡಾ.ಕೆ.ರವೀಂದ್ರನಾಥ**
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಹಸ್ತಪ್ರತಿಶಾಸ್ತ್ರ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦

# ಧರ್ಮಕಲ್ಯಾಣ: ಒಂದು ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿರುವ ಕಿರು ಪ್ರಬಂಧ)

ಸಂಶೋಧಕ
**ಗೋಡಿಹಾಳ ಕಾಂತೇಶರೆಡ್ಡಿ ರಾಮರಡ್ಡಿ**

ಮಾರ್ಗದರ್ಶಕರು
**ಡಾ.ಕೆ.ರವೀಂದ್ರನಾಥ**
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



**ಹಸ್ತಪ್ರತಿಶಾಸ್ತ್ರ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦

891

## ದೃಢೀಕರಣ ಪತ್ರ

"ಧರ್ಮಕಲ್ಯಾಣ: ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಸಂಶೋಧನಾ ಕಿರು ಪ್ರಬಂಧವನ್ನು ಗೋಡಿಹಾಳ ಕಾಂತೇಶರೆಡ್ಡಿ ರಾಮರಡ್ಡಿ ಇವರು ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ.

ಪ್ರಸ್ತುತ ವಿಷಯ ಕುರಿತು ಯಾವುದೇ ವಿಶ್ವವಿದ್ಯಾಲಯದಲ್ಲಿ ಇಡಿಯಾಗಿ ಇಲ್ಲವೆ ಬಿಡಿಯಾಗಿ ಅಧ್ಯಯನ ನಡೆದಿರುವುದಿಲ್ಲ. ಇದು ಎಂ.ಫಿಲ್ ಪದವಿಗೆ ಅರ್ಹವಾಗಿದೆ ಎಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 15-9-2010

(ಡಾ.ಕೆ.ರವೀಂದ್ರನಾಥ)
ಮಾರ್ಗದರ್ಶಕರು ಹಾಗೂ ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

''ಧರ್ಮಕಲ್ಯಾಣ: ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ಸಂಶೋಧನಾ ಕಿರು ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಡಾ.ಕೆ.ರವೀದ್ರನಾಥ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಕಿರು ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 15-9-2010

(ಗೋಡಿಹಾಳ ಕಾಂತೇಶರೆಡ್ಡಿ ರಾಮರಡ್ಡಿ)
ಸಂಶೋಧಕ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ



* * *

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

**ಪೀಠಿಕೆ**

'ಕಲ್ಯಾಣ' ಎಂದ ಕೂಡಲೆ ನಮಗೆ ನೆನಪಿಗೆ ಬರುವುದು ಇಂದಿನ ಬೀದರ್ ಜಿಲ್ಲೆಯ ತಾಲೂಕು ಸ್ಥಳವಾಗಿರುವ 'ಬಸವಕಲ್ಯಾಣ'. ಅದು ಬಸವಣ್ಣನವರ ಕಾರ್ಯಕ್ಷೇತ್ರವಾಗುವ ಪೂರ್ವದಲ್ಲಿ, ದಕ್ಷಿಣ ಭಾರತದ ಅತ್ಯಂತ ಗಮನಾರ್ಹ ಪಟ್ಟಣಗಳಲ್ಲಿ ಒಂದು. ಕಲ್ಯಾಣ ಚಾಳುಕ್ಯರ ದೊರೆ ವಿಕ್ರಮಾದಿತ್ಯನ ಕಾಲದಲ್ಲಿ ಒಂದು ಪ್ರಬಲ ರಾಜಕೀಯ ಶಕ್ತಿಯ ಕೇಂದ್ರವಾಗಿ, ರಾಜಧಾನಿಯಾಗಿ ಮೆರೆದ ಕಲ್ಯಾಣ ನಗರ ಬಸವಾದಿ ಶರಣರ ಕಾಲದಲ್ಲಿ ಅದು ಅತ್ಯಂತ ಪ್ರಗತಿಪರ, ವೈಚಾರಿಕ ಪರವಾದ ಶರಣರ ಆಂದೋಲನದ ಕೇಂದ್ರ ಸ್ಥಾನವಾಗಿ ಹೆಸರು ಮಾಡಿದ್ದಿತು. ಭಾರತದ ಮೂಲೆಮೂಲೆಗಳಿಂದ ಸಮಾಜದ ವಿವಿಧ ಸ್ತರಗಳಿಗೆ ಸೇರಿದ ಜನರನ್ನು ಇದು ಆಕರ್ಷಿಸಿತ್ತು. ಕಲ್ಯಾಣಪುರದಲ್ಲಿ ಅಂದು ಸತ್ಯರು, ಸಾತ್ವಿಕರು, ನಿತ್ಯರು, ಮಹಾಜ್ಞಾನಿಗಳು, ಪರಮಶಿವಯೋಗಿಗಳು, ಶಿವಾಗಮಸಾಧ್ಯರು, ಶಿವಸಮಯಪಕ್ಷರು ತುಂಬಿಕೊಂಡಿದ್ದಂತೆ ಕಂಡುಬರುತ್ತದೆ. ಕಲ್ಯಾಣ ನಗರಕ್ಕೆ ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು ಹೋಗಬಾರದೆಂಬ ಪ್ರತೀತಿ ಇದೆ. ಬಸವಾದಿ ಶರಣರ ಕಾಲದಲ್ಲಿ ಕಲ್ಯಾಣ ಪಟ್ಟಣದ ಎಲ್ಲೆಡೆ ಶರಣರ ಸಂಖ್ಯೆ ಅಧಿಕವಾಗಿದ್ದು, ಅವರ ಪ್ರಭಾವ ಮತ್ತು ವಾತಾವರಣ ಜನಸಾಮಾನ್ಯರಲ್ಲಿ ಹಾಸುಹೊಕ್ಕಾಗಿದ್ದಿತು. ಈ ಕಲ್ಯಾಣವನ್ನು ಸಮಯಕಲ್ಯಾಣವೆಂದು ವಿದ್ವಾಂಸರು ಗುರುತಿಸಿದ್ದಾರೆ. ಇದು ಕ್ರಾಂತಿಯಿಂದಾಗಿ ಛಿದ್ರವಾಯಿತು. ಮುಂದೆ ಎರಡು ಶತಮಾನಗಳ ಕಾಲ ಬೂದಿಮುಚ್ಚಿದ ಕೆಂಡದಂತೆ ಸ್ತಬ್ಧವಾಗಿದ್ದಿತು.

ಹದಿನೈದನೆಯ ಶತಮಾನದಲ್ಲಿ ಹಂಪಿಯ ವಿಜಯನಗರದ ಅರಸ ಪ್ರೌಢದೇವರಾಯನ ಕಾಲದಲ್ಲಿ, ವಿಜಯನಗರ ಸಾಮ್ರಾಜ್ಯದ ರಾಜಸತ್ತೆ ಮತ್ತು ಧರ್ಮಸತ್ತೆಗಳೆರಡು ಉತ್ಕರ್ಷವಾದ ತುತ್ತತುದಿಯನ್ನು ಮುಟ್ಟಿದವು. ಪ್ರೌಢದೇವರಾಯನ ಆಪ್ತಮಂತ್ರಿಯೂ, ಸುಪ್ರಸಿದ್ಧ ದಂಡಾಧೀಶನೂ, ಮೇಲಾಗಿ ಕವಿಯೂ ಆಗಿದ್ದ ಲಕ್ಕಣ್ಣದಂಡೇಶನಿಗೆ ತನ್ನ ದೊರೆಯ ಪ್ರಭುತ್ವ ಶಕ್ತಿಯ ಜೊತೆಗೆ ಧರ್ಮಸತ್ತೆಯ ಮಹತಿಯೂ ಮನವರಿಕೆಯಾಗಿದೆ. ಅವನು ತನ್ನ ದೊರೆಯ ಶೌರ್ಯವನ್ನು ಕಲ್ಯಾಣ ಚಾಲುಕ್ಯರ ಆರನೇ ವಿಕ್ರಮಾದಿತ್ಯನಿಗೆ ಸಮೀಕರಿಸಿ ವಿಜಯದ ಉತ್ಸಾಹವನ್ನು, ಅದಕ್ಕಿಂತ ಮಿಗಿಲಾಗಿ ಹಲವಾರು ವೀರಶೈವ ಕವಿಗಳಿಂದ, ದಣ್ಣಾಯಕರಿಂದ, ಆಚಾರ್ಯರಿಂದ, ಶಿವಾನುಭವಿಗಳಿಂದ, ನೂತನ ಪುರಾತನರಿಂದ ನೂರೊಂದು ವಿರಕ್ತರಿಂದ ತುಂಬಿಕೊಂಡಿದ್ದ ತನ್ನ ದೊರೆಯ ರಾಜಧಾನಿಯಲ್ಲಿ ಹಿಂದಣ ಬಸವಾದಿ ಶರಣರ ಆ ಕಲ್ಯಾಣ ಪಟ್ಟಣವನ್ನು

ಕಂಡಿದ್ದರೆ ಆಶ್ಚರ್ಯವಿಲ್ಲ. ರಾಜಸತ್ತೆ ಮತ್ತು ಧರ್ಮಸತ್ತೆಗಳೆರಡು ಪುನರ್‌ವಿಜಯ ಪ್ರೌಢರಾಯನ ರಾಜಧಾನಿ "ವಿಜಯಕಲ್ಯಾಣ" ಪಟ್ಟಣದಲ್ಲಿ ಮೇಳವಿಸಿದ್ದನ್ನು ಮನಗಂಡ ಲಕ್ಕಣದಂಡೇಶ ತನ್ನ ಶಿವತತ್ವಚಿಂತಾಮಣಿಯಲ್ಲಿ 'ವಿಜಯಕಲ್ಯಾಣ', 'ವಿಜಯಕಲ್ಯಾಣಪುರ' ಎಂದು ಕರೆದಿರುವುದು ಉಚಿತವೆನಿಸುತ್ತದೆ. ಇದು ವಚನಸಾಹಿತ್ಯ ಮತ್ತು ಆಗಮ ಸಾಹಿತ್ಯಗಳ ಸಂಗಮವೆನಿಸಿ "ವಚನಾಗಮ"ವೆಂಬ ಸಂಕಲ ಯುಗವನ್ನು ನಿರ್ಮಿಸಿತು.

'ಸಮಯ ಕಲ್ಯಾಣ' ಮತ್ತು 'ವಿಜಯಕಲ್ಯಾಣ' ಪರಂಪರೆಗಳು ಸಾಮಾನ್ಯವಾಗಿ ಎಲ್ಲ ದೃಷ್ಟಿಯಿಂದಲೂ ಒಂದೇ ಆಗಿದ್ದವು. ಮುಂದೆ ನಿರ್ಮಾಣವಾದ 'ಅಮರಕಲ್ಯಾಣ', 'ಧರ್ಮಕಲ್ಯಾಣ' ಮತ್ತು 'ಕಡೆಯಕಲ್ಯಾಣಗಳು' ಸ್ವಲ್ಪ ಭಿನ್ನ ರೀತಿಯ ಆಚರಣೆಯನ್ನು ರೂಢಿಸಿಕೊಂಡಿರುವುದನ್ನು ನೋಡಬಹುದು. ಮೊದಲೆರಡು ಕಲ್ಯಾಣ ಪರಂಪರೆಯಲ್ಲಿ 'ಲಿಂಗಾಯತ' ಧರ್ಮವನ್ನು ಕೇಂದ್ರವಾಗಿರಿಸಿಕೊಂಡು ಧಾರ್ಮಿಕ ಆಚರಣೆಗಳು ನಡೆದರೆ, ಮುಂದಿನ ಮೂರು ಕಲ್ಯಾಣಗಳಲ್ಲಿ ಗುರು-ಶಿಷ್ಯ ಪರಂಪರೆಯನ್ನು ಒಳಗೊಂಡಂತೆ 'ಆರೂಢ' ಮಾರ್ಗದಲ್ಲಿ ಬರುವಂಥ ಆಚರಣೆಗಳು ರೂಢಿಯಲ್ಲಿದ್ದವು. 'ಅಮರಕಲ್ಯಾಣ', 'ಧರ್ಮಕಲ್ಯಾಣ' ಮತ್ತು 'ಕಡೆಯಕಲ್ಯಾಣ' ಪರಂಪರೆಯು ವ್ಯಕ್ತಿಕೇಂದ್ರಿತವಾಗಿ ಸ್ಥಾಪನೆಯಾಗಿ ನೆಲೆ ನಿಂತವುಗಳು. ಈ ಕಲ್ಯಾಣ ಪರಂಪರೆಯಲ್ಲಿ ಮಠ ನಿರ್ಮಾಣ ಮಾಡುವುದು, ಶಿಷ್ಯ ಬಳಗವನ್ನು ಬೆಳೆಸುವುದು ಹೀಗೆ ವ್ಯಕ್ತಿಕೇಂದ್ರಿತವಾದರೆ ಅಂದಿನ ಸಮಯ ಕಲ್ಯಾಣ ಮತ್ತು ವಿಜಯಕಲ್ಯಾಣದಲ್ಲಿ ಸಮುದಾಯ ಕೇಂದ್ರವಾಗಿ ನಿಲ್ಲುತ್ತದೆ.

ಪಂಚಮಹಾಭೂತಗಳಿಂದ ಜಗತ್ತು ನಿರ್ಮಾಣವಾದಂತೆ, ಪಂಚಕಲ್ಯಾಣ ಪರಂಪರೆಯಿಂದ ಜನರ ಆತ್ಮೋನ್ನತಿ ಸಾಧ್ಯವಾಯಿತು. ೧೨ನೇ ಶತಮಾನದಲ್ಲಿ ಶರಣರ ಒಂದು ದೊಡ್ಡ ಪರಂಪರೆಯು ಮುಂದಿನ ಶರಣ ಪರಂಪರೆಗೆ ಮಾದರಿಯಾಯಿತು. ಶತಶತಮಾನಗಳು ಕಳೆದರೂ ಆ ಶರಣ ಸಂಸ್ಕೃತಿಯ ಪ್ರಭಾವ ಇನ್ನೂ ಸೆಳೆದುಕೊಳ್ಳುತ್ತಿದೆ. ಸ್ಥಾವರತ್ವದ ಜಾಡ್ಯವನ್ನು ತೊಡೆದು 'ಜಂಗಮತ್ವದ' ಮೌಲ್ಯಗಳನ್ನು ನಾಡಿನ ಮೂಲೆ ಮೂಲೆಗೂ ಹರಡಿದ್ದರಿಂದ ಕಾಲಕಾಲಕ್ಕೆ ಪರಂಪರೆ ಹುಟ್ಟುತ್ತಾ ಬಂದವು. ಇಂತಹ ಒಂದು ಪರಂಪರೆ ಹದಿನಾರು-ಹದಿನೇಳನೆಯ ಶತಮಾನದಲ್ಲಿ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ನಾಗಾವಿಯಲ್ಲಿ 'ಧರ್ಮಕಲ್ಯಾಣ' ಪರಂಪರೆ ಬೆಳೆದು ಬಂದಿತು. ಇದರ ಕೇಂದ್ರ ಪುರುಷ 'ಗುಂಡಬಸವಣ್ಣ'. ಸಮಯಕಲ್ಯಾಣ ಮತ್ತು ವಿಜಯಕಲ್ಯಾಣದ ಶರಣರಂತೆ, 'ಗುಂಡಬಸವಣ್ಣ' ಅವತಾರಿ ಪುರುಷನಾಗಿ, ಶರಣನಾಗಿ, ಸಂತನಾಗಿ ಜನರ ಕಲ್ಯಾಣಕ್ಕಾಗಿ ಶ್ರಮಿಸಿದವನು. ಇವನ ಮತ್ತು ಇವನು ಸ್ಥಾಪಿಸಿದ 'ಧರ್ಮಕಲ್ಯಾಣದ' ಸತ್ವ ಸಮಗ್ರ ಅಧ್ಯಯನವಾಗಿದೆ.

**ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ನಾಗಾವಿಯು ೧೧ನೇ ಶತಮಾನದಲ್ಲಿ ಪ್ರಮುಖ ವಿದ್ಯಾಕೇಂದ್ರವಾಗಿದ್ದು, ಆ ಕುರಿತಂತೆ ಅಲ್ಲಿ ಈಗಲೂ ಅವಶೇಷಗಳು, ಶಾಸನಗಳು ಇವೆ. ಮುಂದೆ ಹದಿನಾರನೆಯ ಶತಮಾನದಲ್ಲಿ ನಾಗಾವಿಯ ಧರ್ಮಕಲ್ಯಾಣ ಕೇಂದ್ರವಾಗಿ, ಧಾರ್ಮಿಕ ಆಚಾರ-ವಿಚಾರಗಳು ನಡೆಯುವಂತ ಕೇಂದ್ರವಾಯಿತು. ಧರ್ಮಕಲ್ಯಾಣ ಪರಂಪರೆಯು ಹಿಂದಿನ ಕಲ್ಯಾಣ ಪರಂಪರೆಗಳು ಅಂದರೆ, ಹನ್ನೆರಡನೇ ಶತಮಾನದ ಸಮಯಕಲ್ಯಾಣ, ಹದಿನೈದನೇ ಶತಮಾನದ ವಿಜಯಕಲ್ಯಾಣ, ಹದಿನಾರನೇ ಶತಮಾನದ

ಅಮರಕಲ್ಯಾಣ ಕೇಂದ್ರಗಳು ಮುಂದುವರಿಕೆಯಾಗಿ ಧರ್ಮಕಲ್ಯಾಣ ಪರಂಪರೆಯು ಯಾವ ರೀತಿ ಬೆಳೆಯಿತು ಎಂದು ತಿಳಿಯಲು , ಭೌತಿಕವಾದ ಹೋಲಿಕೆಗಳನ್ನು ಸ್ಪಷ್ಟವಾಗಿ ತಿಳಿಯಲು, ನಾಗಾವಿ ಕ್ಷೇತ್ರದಲ್ಲಿ ಧರ್ಮಕಲ್ಯಾಣ ಪರಂಪರೆಯ ಕುರುಹುಗಳನ್ನು ಅಧ್ಯಯನ ಮಾಡಲು ಕ್ಷೇತ್ರಕಾರ್ಯ ಕೈಗೊಂಡು, ಸಮಯಕಲ್ಯಾಣ, ವಿಜಯಕಲ್ಯಾಣ ಮತ್ತು ಅಮರಕಲ್ಯಾಣಗಳ ಭೌತಿಕ ಪರಿಸರದ ಹೋಲಿಕೆಯನ್ನು ಅಧ್ಯಯನಕ್ಕೆ ಒಳಪಡಿಸುವುದು ನಮ್ಮ ಮೂಲ ಉದ್ದೇಶವಾಗಿದೆ.

ಧರ್ಮಕಲ್ಯಾಣದ ಸ್ಥಾಪಕನೆಂದು ಹೇಳಲಾಗುವ ಗುಂಡಬಸವಣ್ಣನ ವಿಚಾರವನ್ನು, ಧರ್ಮಕಲ್ಯಾಣ ಸ್ಥಾಪನೆಗೆ ಪಟ್ಟ ಪರಿಶ್ರಮ, ಅಂದಿನ ಸಮಕಾಲೀನ ಸಾಮೂಹಿಕ ಚಿಂತನೆ, ಆಚರಣೆಗಳು, ಗುಂಡಬಸವಣ್ಣನ ವೈಯಕ್ತಿಕ ಜೀವನ ಹೀಗೆ ಅನೇಕ ವಿಚಾರಗಳು, ಸಮಯಕಲ್ಯಾಣದ ಸಮಕಾಲೀನ ಸಾಮೂಹಿಕ ವಿಚಾರಗಳ, ನಡೆಸಲಾದ ಆಚಾರಗಳು, ವಿಜಯಕಲ್ಯಾಣ ಮತ್ತು ಅಮರಕಲ್ಯಾಣದ ಮುಂದುವರಿಕೆಯಾಗಿ ಬೆಳೆದುಬಂದ ಬಗೆಯನ್ನು ತಿಳಿಯುವುದು ಅಧ್ಯಯನಕ್ಕೆ ಸೂಕ್ತವೆಂದೆನಿಸುತ್ತದೆ.

ಶರಣರ ಚರಿತ್ರೆಯಲ್ಲಿ ಕಲ್ಯಾಣಕ್ಕೆ ಚಾರಿತ್ರಿಕ ಮನ್ನಣೆ ಇದೆ. ಕಲ್ಯಾಣವೆಂಬುದು ಸ್ಥಳನಾಮವಾದಂತೆ ಸರ್ವ ಜನರ ಸಮಕಾಲೀನ ಅಭ್ಯುದಯವನ್ನು ಬಯಸುವ ಕಾರಣವಾಗಿ ಕರ್ನಾಟಕದಲ್ಲಿ ಕಟ್ಟುತ್ತ ಬಂದ ಕಲ್ಯಾಣಗಳಿಗೆ, ಒಂದು ಪರಂಪರೆಯು ಬೆಳೆದು ದೇಶೀಯ ಸೊಗಡಿನಿಂದ ಜೊತೆಗೆ ಐತಿಹಾಸಿಕ ಮಹತ್ವವನ್ನು ಒಳಗೊಂಡು ಪ್ರಾಮುಖ್ಯತೆಯನ್ನು ಗಳಿಸಿವೆ. ಈ ಕಾರಣವಾಗಿ ನಮ್ಮ ಕನ್ನಡ ಕಾವ್ಯಗಳಲ್ಲಿ ಸಮಯಕಲ್ಯಾಣ, ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣ ಹೆಸರಿನ ಕಲ್ಯಾಣಗಳು ಹುಟ್ಟಿಕೊಂಡವು. ಕಲ್ಯಾಣ ಪರಂಪರೆಗಳು ಸಾಹಿತ್ಯಗಳಲ್ಲಿ ಯಾವ ರೀತಿ ಉಲ್ಲೇಖಗೊಂಡಿವೆ ಎನ್ನುವುದರ ಜೊತೆಗೆ ನಮ್ಮ 'ಧರ್ಮಕಲ್ಯಾಣ' ಪರಂಪರೆಯು ಬೆಳೆದುಬಂದ ರೀತಿಯನ್ನು ಉಲ್ಲೇಖಿಸುವ ಕೃತಿಗಳನ್ನು ಅಧ್ಯಯನ ಮಾಡಿ 'ಧರ್ಮಕಲ್ಯಾಣದ' ಸಾಹಿತ್ಯಕ ಪ್ರಜ್ಞೆಯನ್ನು ತಿಳಿಸುವುದು ಅಧ್ಯಯನದ ಉದ್ದೇಶಗಳಲ್ಲೊಂದು.

ಈ ಹಿಂದೆ ಡಾ. ಬಸವಲಿಂಗಪ್ಪ ಸೊಪ್ಪಿನಮಠ ಅವರು "ಕೊಡೇಕಲ್ ಬಸವಣ್ಣ : ಒಂದು ಅಧ್ಯಯನ" ಎನ್ನುವ ಕೃತಿಯಲ್ಲಿ, ಧರ್ಮಕಲ್ಯಾಣ ಮತ್ತು ಅಮರಕಲ್ಯಾಣ ನಿರ್ಮಾಪಕ ಒಬ್ಬನೇ ಎಂಬ ಹೇಳಿಕೆಯನ್ನು ನೀಡಿದ್ದರು. ಆದರೆ ೨೦೦೮ರಲ್ಲಿ ಡಾ. ಕೆ. ರವೀಂದ್ರನಾಥ ಇವರ ಮಾರ್ಗದರ್ಶನದಲ್ಲಿ ಕು. ಅನುಪಮ, ವೆಂ. ಆದಾಪುರ ಅವರು 'ದಿಗ್ಗಿಸಂಗಮನಾಥ : ಒಂದು ಅಧ್ಯಯನ' ಎಂಬ ಎಂ.ಫಿಲ್. ಪ್ರಬಂಧದಲ್ಲಿ ಅಮರಕಲ್ಯಾಣ ಸ್ಥಾಪಕ ದಿಗ್ಗಿಸಂಗಮನಾಥ ಎಂದು ತಿಳಿಸಿದರು. ಆಧಾರಗಳು ಸಿಕ್ಕಂತೆ ಇತಿಹಾಸ ಬದಲಾಗುತ್ತದೆ ಎಂಬಂತೆ ಡಾ. ಎಂ.ಎಂ. ಕಲಬುರ್ಗಿಯವರು ಮತ್ತು ಸಂಗಪ್ಪಯ್ಯ ಸ್ವಾಮಿಯವರು "ಗುಂಡಬಸವೇಶ್ವರ ಚರಿತ್ರೆ" ಎಂಬ ಹಸ್ತಪ್ರತಿಯನ್ನು ಸಂಪಾದಿಸಿ ಪ್ರಕಟಿಸಿದ ನಂತರ ಧರ್ಮಕಲ್ಯಾಣದ ಸ್ಥಾಪಕ ಗುಂಡಬಸವಣ್ಣ ಎಂಬ ಆಧಾರಗಳು ದೊರೆತವು. ಈ ನಿಟ್ಟಿನಲ್ಲಿ ಅಧ್ಯಯನ ಕೈಗೊಂಡು 'ಧರ್ಮಕಲ್ಯಾಣ'ದ ಕ್ಷೇತ್ರ ನಾಗಾವಿಯೆಂದು, ಅದರ ಸ್ಥಾಪಕ 'ಗುಂಡಬಸವಣ್ಣ'ನೆಂದು ತಿಳಿಸುವುದು ಅಧ್ಯಯನ ಮುಖ್ಯ ಉದ್ದೇಶವಾಗಿದೆ.

ಧರ್ಮಕಲ್ಯಾಣವು ತನ್ನದೇ ಆಗಿರುವಂತ ಒಂದು ವಿಶಿಷ್ಟ ಪರಂಪರೆಯನ್ನು ಬೆಳೆಸಿ ನಾಗಾವಿಯನ್ನು ಒಳಗೊಂಡಂತೆ, ಕಕ್ಕಳಮೇಲಿ, ಸಾಲೋಟಗಿ, ಗುಂಡಗುರ್ತಿ, ದಂಡಗುಂಡ ಹೀಗೆ ಅನೇಕ ಪ್ರದೇಶಗಳನ್ನು ಒಳಗೊಂಡಂತೆ ಕ್ಷೇತ್ರಕಾರ್ಯ ಮಾಡಿ ಧರ್ಮಕಲ್ಯಾಣದ ಪ್ರದೇಶವನ್ನು ಸಂಪೂರ್ಣ ಅಧ್ಯಯನ ಮಾಡುವುದರ ಜೊತೆಗೆ, ಧರ್ಮಕಲ್ಯಾಣ ಪರಿವಾರದ ಪ್ರಮುಖ ವ್ಯಕ್ತಿಗಳನ್ನು ಮತ್ತು ಅವರ ಸಾಹಿತ್ಯವನ್ನು ಪರಿಚಯಿಸಲಾಗುವುದು. ಗುಂಡಬಸವಣ್ಣ 'ಧರ್ಮಕಲ್ಯಾಣ' ಎಂದು ಕರೆದದ್ದರ ಸಾರ್ಥಕತೆಯನ್ನು ತಿಳಿಸಿಕೊಡುವುದು ಅಧ್ಯಯನ ಉದ್ದೇಶಗಳಲ್ಲೊಂದು.

**ಅಧ್ಯಯನದ ಸ್ವರೂಪ**

"ಧರ್ಮಕಲ್ಯಾಣ : ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯದಡಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದ್ದು, ಅಧ್ಯಯನದ ಅನುಕೂಲಕ್ಕಾಗಿ ಏಳು ಅಧ್ಯಾಯಗಳನ್ನಾಗಿ ಮಾಡಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಹೇಳಲಾಗಿದೆ.

ಎರಡನೆಯ ಅಧ್ಯಾಯದ ಧರ್ಮಕಲ್ಯಾಣ ನಾಗಾವಿಯ ಸ್ಥಳನಾಮ ಅಧ್ಯಯನ ಮಾಡಲಾಗಿದೆ. ನಾಗಾವಿಯ ಭೌಗೋಳಿಕ ಪರಿಸರ, ಶೈಕ್ಷಣಿಕ ಪರಿಸರ, ಸಾಮಾಜಿಕ ಪರಿಸರ, ಧಾರ್ಮಿಕ ಪರಿಸರದ ಹಿನ್ನೆಲೆಯಲ್ಲಿ ನಾಗಾವಿಯ ಚಾರಿತ್ರಿಕ ಅಧ್ಯಯನ ಮಾಡಲಾಗಿದ್ದು, ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ವಾಸ್ತವ ಚಿತ್ರಣವನ್ನು ಬಿಂಬಿಸಲಾಗಿದೆ. ನಾಗಾವಿಯ ಪರಿಸರದ ಎಲ್ಲ ದೇವಾಲಯಗಳ ವಾಸ್ತುಶಿಲ್ಪವನ್ನು ಮತ್ತು ಅವುಗಳ ನಿರ್ಮಾಣ ಕಾಲಗಳನ್ನು ತಿಳಿಸಲಾಗಿದ್ದು, ದೇವಾಲಯದಲ್ಲಿರುವ ಶಾಸನಗಳ ವಿವರವನ್ನು ನೀಡಲಾಗಿದೆ.

ಅಧ್ಯಾಯ ಮೂರರಲ್ಲಿ 'ಧರ್ಮಕಲ್ಯಾಣ' ಕ್ಷೇತ್ರವನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾಗಿರುವ ಕೃತಿಗಳನ್ನು ಸಮೀಕ್ಷೆ ಮಾಡಲಾಗಿದೆ. ಅದರಲ್ಲಿ ಗುಂಡಬಸವಣ್ಣನನ್ನು ಧರ್ಮಕಲ್ಯಾಣ ಸ್ಥಾಪಕನೆಂದು ಉಲ್ಲೇಖಿಸಿರುವ ಮತ್ತು ಗುಂಡಬಸವೇಶ್ವರನ ಸಮಗ್ರ ಚರಿತ್ರೆಯನ್ನು ಹೇಳುವ "ಗುಂಡಬಸವೇಶ್ವರ ಚರಿತ್ರೆ, ಪ್ರಾಸಂಗಿಕವಾಗಿ ಗುಂಡಬಸವನನ್ನು ಮತ್ತು ನಾಗಾವಿಯನ್ನು ಉಲ್ಲೇಖಿಸುವ 'ನಂದಿಯಾಗಮಲೀಲೆ'ಯನ್ನು, ಧರ್ಮಕಲ್ಯಾಣ ಪರಂಪರೆಯ ಪ್ರಮುಖ ವ್ಯಕ್ತಿ ಈರಪ್ಪಯ್ಯ ರಚಿಸಿರುವ ಸ್ವರವಚನ ಮತ್ತು ಡಂಗುರ ಪದ ಸಾಹಿತ್ಯ ಕೃತಿಗಳನ್ನು ಸಮೀಕ್ಷೆ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಧರ್ಮಕಲ್ಯಾಣ ರೂವಾರಿಯಾದ ಗುಂಡಬಸವಣ್ಣನ ವೈಯಕ್ತಿಕ ಜೀವನವನ್ನು ತಿಳಿಸುವ ಜನನ, ಬಾಲ್ಯ, ಮದುವೆ, ಕಾರ್ಯಕ್ಷೇತ್ರ, ಬೋಧನೆ, ಗುರುಪರಂಪರೆ ಹೀಗೆ ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಧರ್ಮಕಲ್ಯಾಣದ ಪರಂಪರೆಯನ್ನು ಮುಂದುವರಿಸಿದ ಮತ್ತು ಶ್ರಮಪಟ್ಟಂಥ ನಾಗಾವಿಯ ತಿಪ್ಪಣ್ಣಯ್ಯ, ಕಕ್ಕಳಮೇಲಿಯ ಅಲ್ಲಮಪ್ರಭು, ನಾಗಾವಿ ಈರಪ್ಪಯ್ಯ, ಸಾಲೋಟಗಿ ಶಿವಯೋಗಿಗಳ ಕುರಿತಂತೆ ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಧರ್ಮಕಲ್ಯಾಣ ಪರಂಪರೆಯು ಕಲ್ಯಾಣ ಪರಂಪರೆಯ ಭಾಗವಾಗಿ ಒಡಮೂಡಿದ ರೀತಿಯನ್ನು ಹಾಗೂ ಸಮಯಕಲ್ಯಾಣ, ವಿಜಯಕಲ್ಯಾಣ, ಅಮರಕಲ್ಯಾಣ ಮಾದರಿಯಲ್ಲಿ ಕಲ್ಯಾಣ ಪರಂಪರೆ

ನಾಲ್ಕನೆಯ ಭಾಗವಾಗಿ ಯಾವ ಯಾವ ಅಂಶಗಳಿಂದ ಮುಂದುವರಿಯಲ್ಪಟ್ಟಿತು ಎಂಬುದನ್ನು ಅಧ್ಯಯನ ಮಾಡಲಾಗಿದೆ.

ಕೊನೆಯ ಹಾಗೂ ಏಳನೆಯ ಅಧ್ಯಾಯದಲ್ಲಿ ಸಮಾರೋಪ ಮಾಡಲಾಗಿದ್ದು, ಅಧ್ಯಯನದ ಸಾಫಲ್ಯತೆಯನ್ನು ಕುರಿತಂತೆ ತಿಳಿಸಲಾಗಿದೆ. ಕೊನೆಯ ಭಾಗವಾಗಿ ಅನುಬಂಧ ನೀಡಲಾಗಿದ್ದು, ಕ್ಷೇತ್ರಕಾರ್ಯ ಸಂದರ್ಭದಲ್ಲಿ ತೆಗೆಯಲಾದ ಛಾಯಾಚಿತ್ರಗಳನ್ನು, ಮಾಹಿತಿ ನೀಡಿದವರ ವಕ್ತೃವಿವರವನ್ನು ಅಧ್ಯಯನದ ಸಂದರ್ಭದಲ್ಲಿ ಪರಾಮರ್ಶಿಸಲಾದ ಗ್ರಂಥಗಳ ಅಕಾರಾದಿ ವಿವರವನ್ನು ನೀಡಲಾಗಿದೆ. ಹೀಗೆ "ಅಮರಕಲ್ಯಾಣ : ಒಂದು ಅಧ್ಯಯನ" ಎಂಬ ವಿಷಯವನ್ನು ಕೈಗೊಳ್ಳುವುದು ಈ ಕಿರುಪ್ರಬಂಧದ ಉದ್ದೇಶವಾಗಿದೆ.

* * *

## ಅಧ್ಯಾಯ ಎರಡು

# ಧರ್ಮಕಲ್ಯಾಣ (ನಾಗಾವಿ): ಸ್ಥಳನಾಮ ಅಧ್ಯಯನ

೨.೧ ಭೌಗೋಳಿಕ ಪರಿಸರ

೨.೨ ಶೈಕ್ಷಣಿಕ ಪರಿಸರ

೨.೩ ಸಾಮಾಜಿಕ ಪರಿಸರ

೨.೪ ಧಾರ್ಮಿಕ ಪರಿಸರ

# ಧರ್ಮಕಲ್ಯಾಣ (ನಾಗಾವಿ): ಸ್ಥಳನಾಮ ಅಧ್ಯಯನ

ಗುಲಬರ್ಗಾ ಜಿಲ್ಲೆ ಚಿತ್ತಾಪುರ ತಾಲೂಕಿನಲ್ಲಿರುವ ನಾಗಾವಿಯು ಪ್ರಾಚೀನ ಕಾಲದಿಂದಲೂ ಹೆಸರುವಾಸಿಯಾಗಿದೆ. ನಾಗಾವಿಯ ಸ್ಥಳನಾಮ ಅಧ್ಯಯನದಿಂದ ಅದರ ಪ್ರಾಚೀನತೆಯನ್ನು ಕಟ್ಟಿಕೊಡಲು ಸಾಧ್ಯವಾಗುತ್ತದೆ. ಅಲ್ಲಿಯ ಸ್ಥಳ ಮಹಿಮೆಯು ಇಂದಿಗೂ ಸಹ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡಿದೆ. ಶಾಸ್ತ್ರೀಯವಾಗಿ ನಡೆಯಬೇಕಾದ ಅಧ್ಯಯನಗಳ ಪೈಕಿ ಸ್ಥಳನಾಮ ಅಧ್ಯಯನವೂ ಒಂದು. ಮಾನವನ ಹುಟ್ಟು ಮತ್ತು ಅವನು ವಾಸಿಸುತ್ತಿದ್ದ ಸ್ಥಳಗಳ ಉಗಮ ಇತಿಹಾಸ, ಜೀವನ ಪದ್ಧತಿ, ಸಂಸ್ಕೃತಿ, ನಾಗರಿಕತೆ, ಪಳೆಯುಳಿಕೆಗಳು ಹೀಗೆ ಅನೇಕ ವಿಷಯಗಳ ತಿಳುವಳಿಕೆ ಸ್ಥಳನಾಮಗಳಿಂದ ಸಾಧ್ಯವಾಗುತ್ತದೆ. ಗತಕಾಲದಲ್ಲಿ ನಡೆದ ಘಟನೆಗಳನ್ನು, ಭೌಗೋಳಿಕ ವಿವರಗಳನ್ನು, ಯುದ್ಧದ ಪರಿಣಾಮಗಳನ್ನು, ವೀರರು ಜಯಿಸಿದ ಕಾಳಗಗಳನ್ನು, ರಾಜರು ಕೊಟ್ಟ ದತ್ತಿಗಳನ್ನು, ಮಾಡಿದ ಯಜ್ಞ ಯಾಗಾದಿಗಳನ್ನು ಸ್ಥಳನಾಮಗಳಿಂದ ತಿಳಿಯಲು ಸಾಧ್ಯವಾಗುತ್ತದೆ.

''ಸ್ಥಳನಾಮವೆಂದರೆ ಊರ ಹೆಸರುಗಳು. ಗ್ರೀಕ್ ಭಾಷೆಯಲ್ಲಿ ಸ್ಥಳನಾಮಕ್ಕೆ 'ಟೊಪೋಸ್' ಎನ್ನುತ್ತಾರೆ. ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಧಾನವೇ ಟೋಪೋಸ್. ಟೋಪೋಸ್ ಭೂ ವಿವರಗಳನ್ನು ಸೂಚಿಸುವ ಅರ್ಥ ಹೊಂದಿದ್ದರೂ ಅಲ್ಲಿ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವೈಲಕ್ಷಣಗಳೆರಡೂ ಒಳಗೊಂಡಿವೆ. ಭಾರತದಲ್ಲಿ ಇಂಥ ಭೌಗೋಳಿಕ ನಾಮ ಅಥವಾ ದೇಶನಾಮಗಳಿಗೆ ಪ್ರಾದೇಶಿಕ ಭಾಷೆಯಲ್ಲಿ ಗ್ರಾಮನಾಮ, ಊರ ಹೆಸರು ಎನ್ನುವರು''[೧] ಆದರೆ ಈ ಹೊತ್ತು ಸ್ಥಳನಾಮಬೇರೆ, ಗ್ರಾಮ ನಾಮ ಬೇರೆ ಹೀಗಾಗಿ ಸ್ಥಳನಾಮ, ಗ್ರಾಮನಾಮ, ವ್ಯಕ್ತಿನಾಮ, ಕುಟುಂಬನಾಮ ಹೀಗೆ ಎಲ್ಲ ನಾಮಗಳ ಅಧ್ಯಯನವೇ 'ನಾಮವಿಜ್ಞಾನಶಾಸ್ತ್ರ' ಎಂಬುದಾಗಿ ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯ ಸರಿ ಎನಿಸುತ್ತದೆ. ಆ ಸ್ಥಳಕ್ಕೆ ಆ ಹೆಸರು ಬರಲು ಕಾರಣವೇನು ಎಂಬುದನ್ನು ತಿಳಿದರೆ, ಆ ಗ್ರಾಮದ ಪ್ರಾಚೀನತೆಯನ್ನು ತಿಳಿಯಬಹುದು.

ನಾಗಾವಿಯನ್ನು ಶಾಸನಗಳಲ್ಲಿ ''ನಾಗವಾವಿ'' ಎಂದು ಕರೆಯಲಾಗಿದೆ.''[೨] ನಾಗಾವಿಯಲ್ಲಿ ಸಿಕ್ಕಿರುವ ಶಾಸನಗಳು ಒಟ್ಟು ಐದು. ಅದರಲ್ಲಿ ಅತ್ಯಂತ ಪ್ರಾಚೀನವಾದದ್ದು ಕ್ರಿ.ಶ. ೧೦೫೮ರ ಶಾಸನ. ಈ ಶಾಸನದಲ್ಲಿ ನಾಗಾವಿಯನ್ನು 'ಮಹಾಗ್ರಹಾರ ನಾಗವಾವಿ' ಎಂದು ಕರೆಯಲಾಗಿದೆ.[೩] ನಾಗಾವಿಯು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿದ್ದು, ಒಂದನೆಯ ಸೋಮೇಶ್ವರನ ಕಾಲಕ್ಕೆ(ಕ್ರಿ.ಶ.೧೦೪೩-೧೦೬೮) ಇಲ್ಲಿ ಘಟಿಕಾಸ್ಥಾನ ಸ್ಥಾಪಿತವಾಯಿತು. ಆದ್ದರಿಂದ ನಾಗಾವಿಯನ್ನು ಮಹಾಗ್ರಹಾರ ನಾಗವಾವಿ ಎಂದು ಕರೆದಿರಬೇಕು. ವೇದ ಅಧ್ಯಯನ ಮಾಡುವವರು ಬ್ರಾಹ್ಮಣರಾಗಿದ್ದರಿಂದ ಅಲ್ಲಿ ಅಗ್ರಹಾರವಿತ್ತೆಂದು ತಿಳಿಯಬಹುದಾಗಿದೆ.

‘ನಾಗವಾವಿ’ಯನ್ನು ‘ನಾಗವಾಪಿ’ ಎಂತಲೂ ಕರೆಯುತ್ತಿದ್ದರೆಂದು ಉಲ್ಲೇಖವಿದೆ.[೪] ನಾಗವಾಪಿಯನ್ನು ವಿಸ್ತರಿಸಿದರೆ ನಾಗ+ವಾಪಿ ಎಂದಾಗುತ್ತದೆ. ಇಲ್ಲಿ ನಾಗ ಎಂದರೆ ನಾಗದೇವತೆ, ಒಂದು ಬಗೆಯ ಸಸ್ಯ ಹಾಗೂ ಕಶ್ಯಪನ ಪತ್ನಿಯಾದ ಕದ್ರು ಎಂಬುವವಳಲ್ಲಿ ಜನಿಸಿದ ಪುರಾಣೋಕ್ತವಾದ ಒಂದು ದೇವತೆ ಎಂಬ ಅರ್ಥವಿದೆ.”[೫] ಇನ್ನು ವಾಪಿ ಎಂದರೆ ಸ್ಥಳ ಎಂದಾಗುತ್ತದೆ. ಈ ಅರ್ಥಗಳನ್ನು ನೋಡಿದಾಗ ಕಶ್ಯಪನ ಪತ್ನಿಯಾದ ಕದ್ರು ಎಂಬುವವಳಲ್ಲಿ ಜನಿಸಿದ ಪುರಾಣೋಕ್ತವಾದ ದೇವತೆ ಇರುವ ಸ್ಥಳ ಎಂದು ತಿಳಿಯುವುದು ಉಚಿತವೆನಿಸುತ್ತದೆ. ಇಂದಿಗೂ ಸಹ ಅಲ್ಲಿ ಪುರಾಣಪ್ರಸಿದ್ಧವಾದ ನಾಗವೇಲಾಂಬ ದೇವಾಲಯವಿದೆ. ಈ ದೇವತೆಯ ಭಕ್ತರು ಕರ್ನಾಟಕದಲ್ಲಿ ಅಷ್ಟೇ ಅಲ್ಲ, ನೆರೆಯ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಗಳಿಂದಲೂ ಆಗಮಿಸುತ್ತಾರೆ. ನಾಗವೇಲಾಂಬ ದೇವತೆಯು ಕರ್ನಾಟಕದ ಪುರಾತನ ರಾಜಮನೆತನಗಳಾದ ರಾಷ್ಟ್ರಕೂಟ ಮತ್ತು ಚಾಲುಕ್ಯ ರಾಜಮನೆತನಗಳ ಕುಲದೇವತೆಯಾಗಿದೆ. ನಾಗವೇಲಾಂಬ ದೇವಾಲಯ ಇರುವದರಿಂದ ನಾಗಾವಿ ಎಂದು ಹೆಸರು ಬಂದಿರುವದನ್ನು ಅಲ್ಲಿಯ ಹಿರಿಯರಿಂದ ತಿಳಿಯಬಹುದಾಗಿದೆ.

‘ನಾಗವಾವಿ’ಯನ್ನು ಬಿಡಿಸಿ ನೋಡಿದಾಗ, ನಾಗ+ವಾವಿ ಎಂದಾಗುತ್ತದೆ. ‘ವಾವಿ’ಯೆನ್ನುವದು ‘ಬಾವಿ’ ಶಬ್ದದಿಂದ ನಿಷ್ಪತ್ತಿ ಹೊಂದಿರುವ ಸಾಧ್ಯತೆಗಳಿವೆ. ನಾಗವೇಲಾಂಬ ದೇವತೆಯ ಗುಡಿಯ ಮುಂದುಗಡೆ ಎರಡು ಬಾವಿಗಳಿವೆ. ಈ ಬಾವಿಯಲ್ಲಿ ಮಿಂದವರಿಗೆ ರೋಗರುಜಿನಗಳೆಲ್ಲ ಕಳೆಯುತ್ತವೆ, ಪಾಪ ಪರಿಹಾರವಾಗುತ್ತದೆ ಎಂಬ ನಂಬಿಕೆಗಳಿವೆ. ಈ ಕಾರಣದಿಂದ ಜನರು ನಾಗವೇಲಾಂಬ ದೇವತೆಯ ಬಾವಿಯನ್ನು ಮತ್ತು ಅದರ ಪಾವಿತ್ರ್ಯತೆಯ ಕುರುಹುಗಳಿಗಾಗಿ ನಾಗ>ಬಾವಿ, ನಾಗ>ವಾವಿ, ನಾಗವಾವಿ> ನಾಗಾವಿ ಎಂಬ ಶಬ್ದ ನಿಷ್ಪತ್ತಿಯಾಗಿರುವ ಸಾಧ್ಯತೆಗಳಿವೆ.

ಇನ್ನು ‘ನಾಗ’ ಜಾತಿಯ ಸಸ್ಯಗಳು ಈ ಪ್ರದೇಶದಲ್ಲಿ ಬೆಳೆಯುವ ಸಾಧ್ಯತೆ ಕಡಿಮೆ ಇದೆ (ನಾಗಜಾತಿಯ ಸಸ್ಯದ ‘ಹೂ’ ಹಾವಿನ ಹೆಡೆಯನ್ನು ಹೋಲುತ್ತದೆ). ಆ ಜಾತಿಯ ಸಸ್ಯಗಳು ಮಲೆನಾಡಿನ ಪ್ರದೇಶದ ಕಡೆ ಹೆಚ್ಚು ಬೆಳೆಯುತ್ತವೆ. ಪ್ರಸ್ತುತ ನಾಗಾವಿಯು ಉಷ್ಣವಲಯದಲ್ಲಿರುವುದರಿಂದ ಆ ಸಸ್ಯಗಳು ನಾಗಾವಿಯಲ್ಲಿ ಬೆಳೆಯುವುದು ಕಡಿಮೆ ಎಂದು ಹೇಳಬಹುದು. ಹೀಗಾಗಿ ನಾಗಜಾತಿಯ ಸಸ್ಯಗಳು ಬೆಳೆದಿರುವುದರಿಂದ ಆ ಹೆಸರು ಬಂದಿದೆ ಎಂದು ಹೇಳುವದು ಅಷ್ಟು ಸಮಂಜಸ ಎನಿಸುವುದಿಲ್ಲ.

ಗುಂಡಬಸವೇಶ್ವರ ಚರಿತ್ರೆಯ ಸಂಧಿ ೨ರ, ೨ ಷರ್ಕ್ಯದ ಉಲ್ಲೇಖದಿಂದ ಸಂಗನಬಸವನ ಅಕ್ಕ ನಾಗಾಯೆಂಬುವಳು ಆಳಿದ ಕಾರಣ ಆ ಗ್ರಾಮಕ್ಕೆ ನಾಗಾವಿ ಎಂಬ ಹೆಸರು ಬಂದಿರುವುದಾಗಿ ತಿಳಿಸುವ ಪದ್ಯ ಹೀಗಿದೆ.

“ಸಂಗನಬಸವನ ಅಕ್ಕ ನಾಗಾಯೆಂಬ
ಅಂಗನೆಯಾಳಿದ ಗ್ರಾಮದಲಿ |
ಹಿಂಗದೆ ಪೂರ್ವಭಾಗದಲಿ ಕೊಳಗಸೊಳು
ಸಂಗಮೇಶ್ವರ ನೆಲಸಿಹನು”

ಎಂಬ ಉಲ್ಲೇಖವಿರುವುದರಿಂದ ಸಂಗನಬಸವನ ಅಕ್ಕ ನಾಗಾಯಿ ಎಂಬುವಳು ಈ ಗ್ರಾಮವನ್ನು ಆಳಿದ್ದರಿಂದ ನಾಗಾವಿ ಎಂಬ ಹೆಸರು ಬಂದಿದೆ ಎಂದು ಅಭಿಪ್ರಾಯಪಡಬಹುದಾಗಿದೆ.

ಇತ್ತೀಚೆಗೆ ನಾಗಾವಿಯನ್ನು ನಾಗಾಯಿ ಎಂತಲೂ ಕರೆಯುವ (ಉಚ್ಚಾರ ಮಾಡುವುದನ್ನು) ಜನರನ್ನು ಕಾಣುತ್ತೇವೆ. ನಾಗಾವಿಯನ್ನು ನಾಗಾಯಿ ಎಲ್ಲಮ್ಮನ ಸ್ಥಳವೆಂತೂ ಕರೆಯುತ್ತಾರೆ. ನಾಗಾವಿಯಲ್ಲಿ ಇಂದು ಜನವಸತಿ ಇಲ್ಲ. ನಾಗಾಯಿ ಎಲ್ಲಮ್ಮನ ಭಕ್ತರು ಅಪಾರ ಸಂಖ್ಯೆಯಿಂದ ಬರುವುದರಿಂದಲೂ ಮತ್ತು ನಂದಿಬಾವಿಯ ಪಾವಿತ್ರ್ಯತೆಯ ನಂಬಿಕೆ ಜನರಲ್ಲಿ ಇರುವುದರಿಂದಲೂ ಅಪಾರ ಪ್ರಮಾಣದ ಭಕ್ತರು ಹೊರರಾಜ್ಯಗಳಿಂದಲೂ ಆಗಮಿಸುತ್ತಾರೆ. ನಾಗಾವಿ ಸ್ಥಳದ ಮಹಿಮೆಯು ಶತಮಾನಗಳಷ್ಟು ಹಿಂದಿನ ಚರಿತ್ರೆಯನ್ನು ಹೇಳುವಂತದ್ದಾಗಿದೆ. ಪುರಾಣಕಾಲದಿಂದ ಇಂದಿನವರೆಗೂ ತನ್ನ ಸ್ಥಳದ ನಾಮ ಅಲ್ಪ ಸ್ವಲ್ಪ ಬದಲಾಗಿರುವುದನ್ನು ಬಿಟ್ಟರೆ ಇಂದಿಗೂ ಪುರಾಣಕಾಲದಿಂದ ಈಗಿನವರೆಗೆ ನಾಗಾವಿ ಹೆಸರು ಉಳಿದುಬಂದಿರುವುದು ಆ ಪ್ರದೇಶದ ಪ್ರಾಚೀನತೆಗೆ ಸಾಕ್ಷಿಯಾಗಿದೆ.

**೨.೧. ಭೌಗೋಳಿಕ ಪರಿಸರ**

ನಾಗಾವಿಯು ಧರ್ಮಕಲ್ಯಾಣ ಆಗುವುದಕ್ಕಿಂತ ಪೂರ್ವದಲ್ಲಿ ಘಟಿಕಾಸ್ಥಾನವಾಗಿತ್ತು ಎಂದು ಶಾಸನಗಳಿಂದ ತಿಳಿಯುತ್ತದೆ.[೫] ನಾಗಾವಿಯು ಕಲ್ಯಾಣ ಚಾಲುಕ್ಯರ ಕಾಲದ ಪ್ರಸಿದ್ಧ ಅಗ್ರಹಾರವಾಗಿದ್ದು ಅಲ್ಲಿ ಒಂದನೆಯ ಸೋಮೇಶ್ವರನ ಕಾಲದಲ್ಲಿ (೧೦೪೩-೧೦೬೮) ಘಟಿಕಾಸ್ಥಾನ ಸ್ಥಾಪನೆಯಾಯಿತು. ಇದನ್ನು ನಿರ್ಮಿಸಿದವನು ಮಧುವರಸ ದಂಡನಾಯಕ.[೬] ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ, ನಾಗಾವಿಯು ೧೧ನೇ ಶತಮಾನದಲ್ಲಿ ಅಗ್ರಹಾರ ಮತ್ತು ಘಟಿಕಾಲಯವಾಗಿದ್ದಿತು ಎಂದ ಮೇಲೆ; ಅಂದಿನ ಕಾಲದಲ್ಲಿ ಅದು ಪ್ರಮುಖ ಕೇಂದ್ರವಾಗಿ ಹೊರಹೊಮ್ಮಿದೆ. ಅರಲು ೩೦೦ರ ರಾಜಧಾನಿಯಾಗಿತ್ತು ಎನ್ನುವುದು ೧೦೫೦ರ ನಾಗಾಯಿ ಶಾಸನದ ಮೂಲಕ ತಿಳಿಯುತ್ತದೆ.[೭] ಇಂತ ಪ್ರಮುಖ ಕೇಂದ್ರವಾಗಿದ್ದಿರಬೇಕಾದರೆ, ಭೌಗೋಳಿಕವಾಗಿ ಎಲ್ಲ ರೀತಿಯಿಂದಲೂ ಸುರಕ್ಷೆಯನ್ನು ಹೊಂದಿತ್ತು ಎಂದು ಊಹಿಸಬಹುದಾಗಿದೆ. ಕ್ರಿ.ಶ. ೧೦೯೨ರ ಶಾಸನ ತಿಳಿಸುವಂತೆ ''ನಾಗಾವಿಯ ನಿಸರ್ಗ ಸಂಪತ್ತು ವರ್ಣನೀಯ. ಇಲ್ಲಿನ ಫಲವತ್ತಾದ ಭೂಮಿ ಸರ್ವಕಾಲದಲ್ಲಿಯೂ ಹಸಿರಿನಿಂದ ಕಂಗೊಳಿಸುತ್ತಿತ್ತು. ಸಂಪಿಗೆ, ಎಲೆವಳ್ಳಿ, ಲವಂಗ, ತೆಂಗು, ಬಾಳೆ, (ಕರ್ಪೂರ), ಅರಿಶಿನ ಮುಂತಾದ ಬೆಲೆ ಬಾಳುವ ಬೆಳೆಗಳನ್ನು ಬೆಳೆಯುತ್ತಿದ್ದರೆಂದು ತಿಳಿಯುತ್ತದೆ.''[೮] ನಾಗಾವಿಯ ಅಂದಿನ ಪ್ರದೇಶವು ನೀರಾವರಿಯನ್ನು ಹೊಂದಿತ್ತು ಎಂಬುದಕ್ಕೆ ಅಲ್ಲಿ ಈಗಲೂ ತೆರೆದ ಬಾವಿಗಳು ಸಾಕಷ್ಟು ಇರುವುದನ್ನು ಗಮನಿಸಬಹುದು.

'ಗುಂಡಬಸವೇಶ್ವರ ಚರಿತ್ರೆ' ಕಾವ್ಯದಲ್ಲಿ ಮೂರನೆಯ ಸಂಧಿಯು ಪ್ರಾರಂಭವಾಗುವುದೇ ಅಲ್ಲಿನ ಭೌತಿಕ (ಭೌಗೋಳಿಕ) ವಿವರಗಳಿಂದ. ಈ ನಾಗಾವಿ ಪ್ರದೇಶ ಯಾವ ಯಾವ ಪ್ರದೇಶದಿಂದ ಎಷ್ಟು ದೂರ ಇದೆ ಎನ್ನುವಂತಹ ವಿಚಾರವನ್ನು ಮೊದಲಿಗೆ ಉಲ್ಲೇಖಿಸುತ್ತದೆ. ಕಲ್ಯಾಣಕ್ಕೆ ಏಳು ಯೋಜನ ದಕ್ಷಿಣಕ್ಕೆ, ದಂಡಗುಂಡಕ್ಕೆ ಬಂದು ಕಾಲು ಯೋಜನ ಉತ್ತರಕ್ಕೆ ಬಸವೇಶ (ನಂದಿ) ನೆಲೆಸಿದ್ದಾನೆ. ಇಲ್ಲಿಂದ ಮೂರು ಯೋಜನೆ ದೂರದಲ್ಲಿ ಕೂಡಲ ಸಂಗಮವಿದೆ.[೯] ಇಲ್ಲಿಂದ ಅರ್ಧಗಾವುದ ದೂರದ ಈಶಾನ್ಯದಲ್ಲಿ (ನಾಗಾವಿಯಲ್ಲಿ) ಗುಂಡಬಸಪ್ಪ ಜನಿಸಿದ,[೧೦] ಎನ್ನುವಂತಹ ವಿಚಾರ ಬರುವುದರಿಂದ ನಾಗಾವಿಯು ಯಾವ ಪ್ರದೇಶದಲ್ಲಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಧರ್ಮಕಲ್ಯಾಣದ ಪರಿಸರಕ್ಕೆ ಸಂಬಂಧಿಸಿದಂತೆ ಈ ಕಾವ್ಯದಲ್ಲಿ ಉಲ್ಲೇಖಿತವಾಗಿರುವ ಭೌತಿಕ (ಭೌಗೋಳಿಕ) ಅಂಶಗಳೆಂದರೆ ದೇವಾಲಯಗಳು. ಇಲ್ಲಿ ಯಾವ ಯಾವ ದೇವಾಲಯಗಳು ಎಷ್ಟು ಅಂತರದಲ್ಲಿವೆ ಎನ್ನುವಂತಹ ವಿಚಾರ ತಿಳಿಯುತ್ತದೆ. ನಾಗಾವಿಯು ಸಂಗನಬಸವನ ಅಕ್ಕ ನಾಗಾಯಿ ಆಳಿದ ಗ್ರಾಮ. ಇದರ ಪೂರ್ವಭಾಗದ ಕೂಗಳತೆಯಲ್ಲಿ ಸಂಗಮೇಶ್ವರ ನೆಲೆಸಿದ್ದಾನೆ. ಈ ಊರಿನ ವಾಯವ್ಯದಲ್ಲಿ ಹರದಾರಿ ದೂರದಲ್ಲಿ ಕಂಗಳಿಗೆ ಸೋಮಯ್ಯ, ವೀರಭದ್ರ ನೆಲೆಸಿದ್ದಾರೆ. ಸನ್ನೆ ಗ್ರಾಮದ ಮೂಡಣದಲ್ಲಿ ಪಾರ್ವತಿ ಸಹಿತ ಪರಮೇಶ್ವರ ನೆಲೆಸಿದ್ದಾರೆ. ಊರ ಮುಂದೆ ಪುಣ್ಯತೀರ್ಥ ನಂದಿಬಾವಿ ಇದೆ. ಇವುಗಳ ದಡದಲ್ಲಿ ಪೂರ್ವಾಭಿಮುಖವಾಗಿ ರಾಮೇಶ್ವರ ನಿದ್ದಾನೆ. ಇಲ್ಲಿಯ ವನದಲ್ಲಿ ಸಿದ್ದೇಶ್ವರನ ಎದುರು ನಂದಿಕೇಶ್ವರ ನೆಲೆಸಿದ್ದಾನೆ. ಮೂಲ ಸ್ಥಾನದಲ್ಲಿ ಮಲ್ಲಿಕಾರ್ಜುನ ದೇವಾಲಯ, ಇಲ್ಲಿಯೇ ಜಕ್ಕಿ ಕಾಳವ್ವೆ ದೇವತೆಗಳಿವೆ.[೧೧] ಇದು ನಾಗಾವಿಯ ಅಂದಿನ ಭೌತಿಕ ಭೌಗೋಳಿಕ ಅಂಶಗಳ ವಿವರಗಳು ಗುಂಡಬಸವೇಶ್ವರ ಚರಿತ್ರೆಯಲ್ಲಿ ವಿವರವಾಗಿ ಚಿತ್ರಿತವಾಗಿದೆ.

ದೇವಾಲಯಗಳ ವಿವರಣೆಯ ನಂತರ ಬರುವ ಅಂಶಗಳೆಂದರೆ ಅಲ್ಲಿ ಬೆಳೆಯುವಂತಹ ಬೆಳೆಗಳು ಮತ್ತು ಸುತ್ತಮುತ್ತಲ ಪರಿಸರದ ವಿವರಣೆ ಅಡಿಕೆ, ತೆಂಗು, ನಿಂಬೆ, ದಾಳಿಂಬೆ, ದ್ರಾಕ್ಷಿ, ಕಬ್ಬು, ಬಾಳೆ ಆ ಪ್ರದೇಶದಲ್ಲಿ ಬೆಳೆಯುತ್ತಿದ್ದ ಫಸಲುಳಾಗಿವೆ. ಹಲಸು, ಮಾವು, ಪರಿಮಳದ ಹೂದೋಟ, ಎಲ್ಲಿ ನೋಡಿದರೂ ರಾಜಾನ್ನ ಬೆಳೆಯುವ ಗದ್ದೆ, ತರಕಾರಿಯ ತೋಟಗಳು ಇದ್ದವೆಂದು ತಿಳಿಯುತ್ತದೆ.[೧೨] ಎತ್ತ ನೋಡಿದರೂ ನೀರಿನ ಕಾಲುವೆಗಳು, ತೆರೆದ ಬಾವಿಗಳು, ಎತ್ತ ನೋಡಿದರೂ ನೀರಿನಿಂದ ಆವೃತವಾದ ಭೂಮಿ ಇದ್ದಿತು ಎಂಬ ಭೌತಿಕ ಅಂಶಗಳ ವಿವರಣೆಯು ಬರುತ್ತದೆ. ಹೀಗೆ ಧರ್ಮಕಲ್ಯಾಣ ಹೆಸರಿನ ನಾಗಾವಿಯ ಪರಿಸರವು ನೋಡಲು ಮನೋಹರವಾಗಿದ್ದಿತು ಎಂಬುದು ಗುಂಡಬಸವೇಶ್ವರ ಚರಿತ್ರೆಯಿಂದ ತಿಳಿಯುತ್ತದೆ.

ನಾಗಾವಿಯ ಇಂದಿನ ವಾಸ್ತವ ಪರಿಸರ ಅಂಶವನ್ನು ಗಮನಿಸಿದರೆ, ಹಾಳುಹಂಪೆಯಂತೆ ಭಾಸವಾಗುತ್ತದೆ. ಇಡೀ ಹಳೆಯ ನಾಗಾವಿಯನ್ನು ಒಂದು ದಿನವೆಲ್ಲ ಸುತ್ತಾಡಿ ಅಲ್ಲಿಯ ಈಗಿನ ಪಾಳುಬಿದ್ದ ಅವಶೇಷಗಳನ್ನು ಅವಲೋಕಿಸಿದಾಗ, ೧೦ಶಿಲರಲ್ಲಿ ಉನ್ನತ ಶಿಕ್ಷಣಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟು ವ್ಯವಸ್ಥಿತ ಘಟಿಕಾಸ್ಥಾನಯವಾಗಿದ್ದು, ಸುತ್ತಮುತ್ತಲ ಖ್ಯಾತಿಯನ್ನು ಪಡೆದಂತಹ ನಾಗಾವಿಯು ಇಂದು ಅಲಕ್ಷಿತವಾಗಿದ್ದು ಅವಸಾನದ ಅಂಚಿನಲ್ಲಿದೆ. ಗತಕಾಲದ ವೈಭವವನ್ನು ಸಾರುತ್ತಾ ನಿಂತಿದೆ. ಅಲ್ಲಿಯ ಅವಶೇಷಗಳನ್ನು ನೋಡಿದರೆ ಬಹುಶಃ ನಾಗಾವಿಯ ಘಟಿಕಾಸ್ಥಾನಯದ ಪರಿಸರವು ಮುಸ್ಲಿಮರ ದಾಳಿಗೆ ಸಿಲುಕಿ ನಾಶವಾಗಿದ್ದಿರಬಹುದು. ಬಹಳಷ್ಟು ಘಟಿಕಾಸ್ಥಾನಯದ ಹಾಗೂ ದೇವಾಲಯದ ಕಟ್ಟಡಗಳನ್ನು ಹೊರಗಿನಿಂದ ನೋಡಿದರೆ ಎಲ್ಲ ಕಟ್ಟಡಗಳ ಮೇಲ್ಭಾಗವು ಗುಮ್ಮಟ ಹಾಗೂ ಮಿನಾರ್‌ಗಳನ್ನು ಒಳಗೊಂಡಿರುವಂತೆ ತೋರಿಬರುವುದರಿಂದ ಇವೆಲ್ಲವು ಮುಸ್ಲಿಮರ ಶೈಲಿಗೆ ಪರಿವರ್ತನೆಯಾದಂತೆ ಕಂಡುಬರುತ್ತವೆ. ಒಳಹೊಕ್ಕು ನೋಡಿದರೆ ದೇವಾಲಯ ವಾಸ್ತು ಶೈಲಿಯಲ್ಲಿ ಹಿಂದೂ ದೇವಾಲಯವನ್ನೇ ಹೋಲುತ್ತದೆ.

ಕರ್ನಾಟಕದ ಸಂಸ್ಕೃತಿಯ ಪ್ರತೀಕವಾದ ನಾಗಾವಿಯು ಜಾಲಿಯ ಮುಳ್ಳು ಗಿಡಗಳಿಂದ ಆವೃತವಾಗಿ ಪಾಳುಬಿದ್ದ ಅವಶೇಷಗಳಿಂದ ಯಾರಿಗೂ ಬೇಡವಾದ ಸ್ಥಳವಾಗಿದೆ. ಈಗಿನ ಅಲ್ಲಿಯ ಸ್ಥಿತಿಯನ್ನು ಮನಗಂಡರೆ, ಹಿಂದೆ

ನಾಗಾವಿಯು ವ್ಯವಸ್ಥಿತವಾದ ಘಟಿಕಾಸ್ಥಾನವಾಗಿತ್ತು ಎಂಬುದು ಕೇವಲ ಕಾಲ್ಪನಿಕವೋ ಎಂದು ಬೇಟಿ ಕೊಟ್ಟವರಿಗೆ ಅನಿಸಿದರೆ ಆಶ್ಚರ್ಯವಿಲ್ಲ. ಸಂಬಂಧಿಸಿದ ಇಲಾಖೆ-ಸಂಸ್ಥೆ ಹಾಗೂ ಸ್ಥಳಿಯರು ಈ ನಾಗಾವಿಯ ಬಗೆಗೆ ಆಸಕ್ತಿ ತೋರಿದಂತೆ ಕಂಡುಬರುವುದಿಲ್ಲ. ಆಂಧ್ರಪ್ರದೇಶದ ಪುರಾತತ್ವ ಇಲಾಖೆಯವರ ಒಂದು ಫಲಕ ಮಾತ್ರ ಮದುಸೂಧನ ದೇವಾಲಯದ ಆವರಣದಲ್ಲಿ ಮುಂಭಾಗಕ್ಕೆ ಹಾಕಲಾಗಿದೆ. ಈಗಂತೂ ಅಲ್ಲಿ ಬೆಳೆದಿರುವ ಜಾಲಿಗಿಡಗಳಿಂದ ಆವೃತವಾಗಿದ್ದು ಪ್ರವೇಶಿಸುವದು ಅತ್ಯಂತ ದುರ್ಗಮವಾಗಿದೆ.

ನಾಗಾವಿಯು ಹಿಂದೊಮ್ಮೆ ವೈಭವಯುತವಾಗಿ ಮೆರೆದು ಇಂದು ಹಾಳು ಬಿದ್ದಿರುವುದರಿಂದ ಈಗ ಅಲ್ಲಿ ಜನವಸತಿ ಇಲ್ಲದಂತಾಗಿದೆ. ನಾಗಾವಿ ಹಿಂದೆ ಘಟಿಕಾಸ್ಥಾನವನ್ನು ಹೊಂದಿತ್ತು ಎನ್ನುವುದು ಕೇವಲ ದಾಖಲೆಯಲ್ಲಿ ಮಾತ್ರ ಎಂದೆನಿಸುತ್ತದೆ. ಆದರೆ ನಾಗಾವಿಯ ಎಲ್ಲದೇವಿಯು ಇಂದಿಗೂ ತನ್ನ ಪ್ರಸಿದ್ಧಿಯನ್ನು ಉಳಿಸಿಕೊಂಡಿದೆ. ಅಪಾರ ಸಂಖ್ಯೆಯ ಭಕ್ತರು ಪ್ರತಿನಿತ್ಯ ಭೇಟಿ ನೀಡುತ್ತಾರೆ. ಈರಪ್ಪಯ್ಯನ ದೇವಾಲಯ ಇಂದಿಗೂ ಕೊಡೇಕಲ್ಲ ಮಠದವರಿಂದ ಪೂಜೆಗೊಳ್ಳುತ್ತದೆ. ನಾಗಾವಿಯು ಒಂದು ಸಾವಿರ ವರ್ಷದ ಇತಿಹಾಸದಲ್ಲಿ ಅನೇಕ ಭೌಗೋಳಿಕ ವೈಪರೀತ್ಯವನ್ನು ಹೊಂದಿ, ಇಂದು ಪಾಳುಬಿದ್ದ ಪ್ರದೇಶವಾಗಿ ಗೋಚರಿಸುತ್ತದೆ.

**೨.೨. ಶೈಕ್ಷಣಿಕ ಪರಿಸರ**

ಕರ್ನಾಟಕ ಸಾಂಸ್ಕೃತಿಕವಾಗಿ ಸಂಪತ್ಭರಿತವಾದ ಪ್ರದೇಶ. ಕಲೆ, ಸಾಹಿತ್ಯ, ಸಂಸ್ಕೃತಿ ಎಲ್ಲವುಗಳಿಂದಲೂ ಈ ಪ್ರದೇಶ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿದೆ. ಕಾಲಕಾಲಕ್ಕೆ ನಾಡನ್ನಾಳಿದ ಅರಸರು, ರಾಣಿಯರು, ಸಾಮಂತರು, ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗೆ ವಿಶೇಷವಾದ ಕೊಡುಗೆಯನ್ನು ನೀಡುತ್ತಾ ಬಂದಿದ್ದಾರೆ. ಅಂದು ಈ ನಾಡಿನಲ್ಲಿ ರಾಜ್ಯದ ರಕ್ಷಣೆಯ ದೃಷ್ಟಿಯಿಂದ ಸಣ್ಣ ಪುಟ್ಟ ಆಡಳಿತ ಕೇಂದ್ರಗಳಿದ್ದವು. ಇವುಗಳನ್ನು ನೋಡಿಕೊಳ್ಳಲು ವಿವಿಧ ವರ್ಗಗಳ ಆಡಳಿತಾಧಿಕಾರಿಗಳೂ ಇರುತ್ತಿದ್ದರು. ಇವರು ನಾಡನ್ನಾಳುವ ಪ್ರಭುಗಳಿಗೆ ಸಾಮಂತರಾಗಿರುತ್ತಿದ್ದರು. ಇವರನ್ನು ದಂಡನಾಯಕರು, ಮಹಾಮಂಡಳೇಶ್ವರರು ಎಂದೆಲ್ಲ ಕರೆಯಲಾಗುತ್ತಿತ್ತು. ಚಾಲುಕ್ಯ ಅರಸ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಮಹಾಮಂಡಲೇಶ್ವರನಾಗಿದ್ದ ಹೈಹಯ ವಂಶದ ಲೋಕರಸನು ಕನ್ನಡ ನಾಡಿನ ಚಿಕ್ಕ ಆಡಳಿತ ಕೇಂದ್ರ ಅರಲು ಮುನ್ನೂರನ್ನು ಆಳುತ್ತಿದ್ದನು. ಈ ಅರಲು ಮುನ್ನೂರಿನಲ್ಲಿಯೇ ನಾಗಾವಿ ಎನ್ನುವ ಪ್ರಸಿದ್ಧ ಅಗ್ರಹಾರ ಒಂದಿತ್ತು.[೧೩]

ಈ ಅಗ್ರಹಾರದ ದೇವಾಲಯಗಳೇ ಮುಂದೆ ಘಟಿಕಾಸ್ಥಾನವಾಗಿ ವಿದ್ಯಾಭ್ಯಾಸಕ್ಕೆ ಮೂಲ ನೆಲೆಯಾದವು. ನಾಗಾವಿಯು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಪ್ರಸಿದ್ಧ ಅಗ್ರಹಾರವಾಗಿದ್ದು, ಕ್ರಿ.ಶ.೧೦೫೮ರ ಒಂದನೆಯ ಸೋಮೇಶ್ವರನ ಕಾಲಕ್ಕೆ ಇಲ್ಲಿ ಘಟಿಕಾಸ್ಥಾನ ಸ್ಥಾಪನೆಯಾಯಿತು. ಇದನ್ನು ನಿರ್ಮಿಸಿದವನು ಮಧುವರಸ ದಂಡನಾಯಕ. ಲೋಕದಲ್ಲಿ ಅವನು ನಿರ್ಮಿಸಿದ ಉದ್ಯಾನ, ನೀಡಿದ ದಾನ, ಇಕ್ಕಿದ ಸತ್ರ, ರಚಿಸಿದ ದೇವಾಲಯ ಇಟ್ಟ ಅರವಟ್ಟಿಗೆಗಳು ಲೆಕ್ಕವಿಲ್ಲವೆಂದು ಶಾಸನಕವಿ ಹೇಳುತ್ತಾನೆ.[೧೪] ಮಧುವರಸನು ಘಟಿಕಾಸ್ಥಾನವನ್ನು ನಿರ್ಮಿಸಿ ಸಾಂಸ್ಕೃತಿಕ ಇತಿಹಾಸದಲ್ಲಿ ತನ್ನ ಹೆಸರನ್ನು ಚಿರಸ್ಥಾಯಿಯಾಗಿಸಿದ್ದಾನೆ.

ಕಾಳಿದಾಸ ದಂಡನಾಯಕನ ಪರಮೇಶ್ವರ ದತ್ತಿಯಾಗಿ ತಾಮ್ರ ಶಾಸನವನ್ನು ಬರೆಯಿಸಿ, ಚತುರ್ವೇದ ಪರಿಣತಿಯಾದ ೪೦೦ ಜನ ಬ್ರಾಹ್ಮಣರಿಗೆ ಅಭಿನವ ಬ್ರಹ್ಮಲೋಕವು ಭೂಮಂಡಲಕ್ಕೆ ಶಿರಸ್ಸು ಕುಂತಳ ಲೋಕಕ್ಕೆ ಮುಖವು ಎನ್ನುವಂತಿದ್ದ ಅರಲು ೩೦೦ರ ತಿಲಕದಂತಿದ್ದ ಮಹಾಗ್ರಹಾರ ನಾಗಾವಿಯಲ್ಲಿ ಇಡೀ ಜಗತ್ತಿಗೆ ಪ್ರತ್ಯಕ್ಷ ಮಾಡಿ ತೋರುವ ಹಾಗೆ ತ್ರೈಪುರುಷ ದೇವರ ಶಾಲೆಯನ್ನು, ಮಧುಸುಧಾಲಯವನ್ನು, ರಾಮೇಶ್ವರಾಲಯವನ್ನು, ಘಟಿಕಾಸ್ಥಾನವನ್ನಾಗಿಸಿದನು.[೨೫] ಈ ಘಟಿಕಾಸ್ಥಾನದಲ್ಲಿ ವೇದ ಅಧ್ಯಯದ ಎರಡು ನೂರು ಜನ, ಶಾಸ್ತ್ರ ಅಧ್ಯಯಗಳು ಐವತ್ತು ಜನ, ಉಪಾಧ್ಯಾಯರು ಮೂವರು, ಭಟ್ಟದರ್ಶನ ನ್ಯಾಸ ಪ್ರಭಾಕರ ವ್ಯಾಖ್ಯಾತೃಗಳು ಮೂರು ಜನ, ಸರಸ್ವತಿ ಭಂಡಾರಿ ಒಬ್ಬ, ಒಬ್ಬ ಘಟಿಕಾಪ್ರಹಾರಿ, ಹೀಗೆ ಒಟ್ಟು ಎರಡು ನೂರು ಐವತ್ತೇಳು ಜನರು ಘಟಿಕಾಸ್ಥಾನದಲ್ಲಿ ವಿದ್ಯೆಯನ್ನು ಕಲಿಯುವ, ಕಲಿಸುವ ಹಾಗೂ ಪೋಷಿಸಿ ಬೆಳೆಸುತ್ತಿದ್ದರು.

ಘಟಿಕಾಲಯದ ಎಲ್ಲ ೨೫೭ ಜನರಿಗೆ ಸೇರಿದಂತೆ ತ್ರೈಪುರುಷ ದೇವರ ಗಂಧಾಕ್ಷತೆ, ಪುಷ್ಪ, ಧೂಪ, ನೈವೇದ್ಯಕ್ಕೆ ದೇವಾಲಯದ ಮತ್ತು ಶಾಲೆಯ ಪರೀಕ್ಷೆ ಮಾಣಿಯರಿಗೆ, ಊಟ, ವಸತಿ ಮತ್ತು ಜೀರ್ಣೋದ್ಧಾರಕ್ಕೆಂದು ಒಟ್ಟು ೧೦೦೦ ಮತ್ತರು ಭೂಮಿಯನ್ನು ದತ್ತಿಯಾಗಿ ಬಿಟ್ಟಿದ್ದರೆಂದು ತಿಳಿದುಬರುತ್ತದೆ.[೨೬]

| | ಉಪಾಧ್ಯಾರು | ಸಂಖ್ಯೆ |
|---|---|---|
| ೧. | ಭಟ್ಟದರ್ಶನ, ನ್ಯಾಸ, ಪ್ರಭಾಕರ ವ್ಯಾಖ್ಯಾನ ವೇತೃಗಳು | ೩ |
| ೨. | ವೇದವನ್ನು ಓದಿಸುವವರು | ೩ |
| ೩. | ಗ್ರಂಥ ಭಂಡಾರಿಗಳು | ೧ |
| ೪. | ಘಟಿಕಾಪ್ರಹಾರಿ | ೧ |

| | ವಿದ್ಯಾರ್ಥಿಗಳು | ಸಂಖ್ಯೆ |
|---|---|---|
| ೧. | ವೇದಾಧ್ಯಯಿಗಳು | ೨೦೦ |
| ೨. | ಶಾಸ್ತ್ರಾಧ್ಯಯಿಗಳು | ೫೦ |

ಚಾಲುಕ್ಯರ ಚಕ್ರೇಶ್ವರನಾದ ೧ನೆಯ ಸೋಮೇಶ್ವರ ಕುಂದರನಾಡಿನ ಕೋಳೂರು ನೆಲೆವೀಡಿನಲ್ಲಿದ್ದಾಗ ಅವನಿಂದ ತನಗೆ ಪರಮೇಶ್ವರ ದತ್ತಿಯಾಗಿ ದೊರಕಿದ ಭೂಮಿಯನ್ನು ಅಲ್ಲಿನ ತ್ರೈಪುರುಷ ದೇವಾಲಯಕ್ಕೂ ಮತ್ತು ತಾನು ಸ್ಥಾಪಿಸಿದ ಘಟಿಕಾಸ್ಥಾನಕ್ಕೂ ಧಾರೆಯೆರೆಯುತ್ತಾನೆ. ಘಟಿಕಾಸ್ಥಾನಕ್ಕೆ ನೀಡಲಾದ ೧೦೦೦ ಮತ್ತರು ಭೂಮಿಯನ್ನು ಈ ಕೆಳಗಿನಂತೆ ಉಪಭೋಗಿಸಬೇಕೆಂದು ನಿರ್ದಿಷ್ಟಪಡಿಸಲಾಗಿತ್ತು.

ಒಟ್ಟು ದತ್ತಿಯ ಉಪಾರ್ಜನೆ

| ಭೂಮಿ | ಉದ್ದೇಶ |
|---|---|
| ೩೫ ಮತ್ತರು | ಭಟ್ಟದರ್ಶನ ವ್ಯಾಖ್ಯಾತೃಗೆ |
| ೩೦ ಮತ್ತರು | ನ್ಯಾಸ ವ್ಯಾಖ್ಯಾತೃಗೆ |
| ೪೫ ಮತ್ತರು | ಪ್ರಭಾಕರ ವ್ಯಾಖ್ಯಾತೃಗೆ |
| ೩೦ ಮತ್ತರು | ಗ್ರಂಥ ಭಂಡಾರಿಗೆ |
| ೩೦ ಮತ್ತರು | ಘಟಿಕಾ ಪ್ರಹಾರಿಗೆ |

ಈ ಮೇಲಿನ ಪರಿಕ್ರಮದಲ್ಲಿ ಹಂಚಲಾದ ಈ ಭೂಮಿಯಲ್ಲಿ ಉಳಿದ ಭಾಗವನ್ನು ದೇವಸ್ಥಾನದ ಇತರೆ ಸೇವಿಕಾ ವೃತ್ತಿಗಳಿಗೂ ಜೀರ್ಣೋದ್ಧಾರಕ್ಕೂ ವಿನಿಯೋಗಿಸಲಾಗುತ್ತಿತ್ತು.[೧೭]

ನಾಗಾವಿ ಘಟಿಕಾಸ್ಥಾನದಲ್ಲಿ ವೇದ, ಶಾಸ್ತ್ರ, ನ್ಯಾಸ, ಪ್ರಭಾಕರ, ಮೊದಲಾದ ವಿದ್ಯಗಳನ್ನು ಹೇಳಿಕೊಡುವ ಉಪಾಧ್ಯಾಯರು ಅವನ್ನು ಆಸ್ಥೆಯಿಂದ ಕಲಿಯುವ ವಿದ್ಯಾರ್ಥಿಗಳು ಒಂದೆಡೆ ಕೂಡಿಯೇ ಇರುತ್ತಿದ್ದರು. ಇದು ಗುರುಕುಲದ ಭವ್ಯಸ್ಮರಣೆಗೆ ಒಂದು ಪ್ರತೀಕವಾಗುತ್ತದೆ. ಇಲ್ಲಿ ಅವರೆಲ್ಲರ ಊಟ ವಸತಿಗಳ ಸೌಲಭ್ಯವಲ್ಲದೆ ಪ್ರತಿಯೊಂದು ಶಾಖೆಯ ವಿದ್ಯೆಯನ್ನು ಬೋಧಿಸುವ ಉಪಾಧ್ಯಾಯರುಗಳಿಗೆ ಸಂಭಾವನೆಯಾಗಿ ಭೂಮಿಯನ್ನು ಉಂಬಳಿ ಹಾಕಿ ಕೊಡಲಾಗಿತ್ತು. ಮಧುಸೂದನ ದೇವಾಲಯದಲ್ಲಿ ಇವರೆಲ್ಲರಿಗೆ ಉಚಿತ ನಿವೇಶನಗಳಿದ್ದುದಾಗಿಯೂ ತಿಳಿಯುತ್ತದೆ. ಏಕದಂಡಿ, ತ್ರಿದಂಡಿ, ಸ್ನಾತಕ, ಬ್ರಹ್ಮಚಾರಿ, ಹಂಸ, ಪರಮಹಂಸ ಮತ್ತು ಅನುಷ್ಠಾಯಿಗಳೆಂಬ ವರ್ಗ ಶ್ರೇಣಿಗಳು ಇದ್ದು ಈ ಎಲ್ಲ ವರ್ಗದವರಿಗೂ ಪ್ರತ್ಯೇಕ ಭವನಗಳನ್ನು ಒದಗಿಸಲಾಗಿತ್ತು. ಋಗ್, ಯಜರ್, ಸಾಮ, ಅಥರ್ವಣ ಹಾಗೂ ಇನ್ನಿತರ ಶಾಖಾ ಸಹಸ್ರ ವೇದ, ವೇದಾಂಗವನ್ನು ಕಲಿಯಲು ವೇದಪಠಣ ಮಠವೊಂದು ಪ್ರತ್ಯೇಕವಾಗಿತ್ತು. ಇಂದಿಗೂ ಇಲ್ಲಿ ೬೦ ಕಂಬದ ಮಂಟಪವಿರುವುದನ್ನು ನಾವು ಕಾಣುತ್ತೇವೆ. ಇಷ್ಟೊಂದು ದೊಡ್ಡದಾದ ವಿದ್ಯಾಕೇಂದ್ರ ಬಹುಶಃ ಕರ್ನಾಟಕದಲ್ಲಿ ಆ ಕಾಲದಲ್ಲಿ ಬೇರೆಡೆಗೆ ಇದ್ದಿರಲಾಗದು.

ಗುಂಡಬಸವೇಶ್ವರ ಚರಿತ್ರೆಯ ೨ನೇ ಸಂಧಿಯ ೮ನೇ ಪದ್ಯದಲ್ಲಿ

ಇಂತು ನೂರೊಂದು ಕಂಬದ ಶಿವಾಲ್ಯದೊಳು
ಸಂತತ ಅಕ್ಕನಾಗಾಯಿ |
ಕಂತುಹರನ ಭಕ್ತೆ ಜಂಗಮಾರ್ಚನೆ ಮಾಡೆ
ಅಂತು ಛತ್ರಸಾವೆಯೆಂದೆನಿಸಿ

ಎಂದಿರುವುದರಿಂದ ಈಗಿನ ೬೦ ಕಂಬದ ಶಿವಾಲಯವೇ ಛಾತ್ರಾದಿನಿಲಯಂ (ವಿದ್ಯಾರ್ಥಿಗಳ ವಾಸಸ್ಥಾನ) ಆಗಿರಬೇಕು.

ನಾಗಾವಿಯು ಅಗ್ರಹಾರವಾಗಿಯೂ, ಘಟಿಕಾಸ್ಥಾನವಾಗಿಯೂ ಮುಂದೆ ಧಾರ್ಮಿಕ ಕ್ಷೇತ್ರವಾಗಿಯೂ ಮೆರೆದು ಇಂದು ನಿರ್ವಸತಿ ಇರುವುದರಿಂದ ಹಾಳುಬಿದ್ದಂತಾಗಿದೆ. ನಾಗಾವಿ ಘಟಿಕಾಲಯದ ವಿದ್ಯಾಭ್ಯಾಸ ವ್ಯಾಪ್ತಿಯ ಬಗೆಗೆ ಕ್ರಿ.ಶ. ೧೦೬೮ ಹಾಗೂ ಕ್ರಿ.ಶ. ೧೦೮೫ರ ಶಾಸನಗಳ ಮೂಲಕ ಕಲಿಯುವ ವಿದ್ಯಾರ್ಥಿಗಳ ವರ್ಗಶ್ರೇಣಿ ಇದ್ದುದರ ಬಗೆಗೆ ತಿಳಿದುಬರುತ್ತದೆ.[೧೮] ಏಕದಂಡಿ, ತ್ರಿದಂಡಿ, ಸ್ನಾತಕ, ಬ್ರಹ್ಮಚಾರಿ, ಹಂಸ, ಪರಮಹಂಸ ಅನುಷ್ಠಾನಿಗಳು, ವೇದ ವೇದಾಂಗಗಳನ್ನು ಅಭ್ಯಸಿಸುವ ವಿದ್ಯಾರ್ಥಿ ವರ್ಗಶ್ರೇಣಿ ಇದ್ದು ಪ್ರತಿಯೊಂದು ಶ್ರೇಣಿಯು ತನ್ನದೇ ಆದ ಭವನಗಳನ್ನು ಹೊಂದಿತ್ತು ಎಂದು ತಿಳಿದುಬರುತ್ತದೆ. ಈ ವಿವರ ಕ್ರಿ.ಶ. ೧೦೫೮ರ ಶಾಸನದಲ್ಲಿ ಉಲ್ಲೇಖಿತವಾಗಿಲ್ಲ. ಆದರೆ ಬೇರೆ ಬೇರೆ ಅಧ್ಯಾಪಕ ವರ್ಗ ಇದ್ದುದರ ಬಗ್ಗೆ ಉಲ್ಲೇಖವಿದೆ. ಅವರೆಂದರೆ ಜನ್ನಯ ಮತ್ತು ಚಟ್ಟೋಪಾಧ್ಯಾಯರು. ಬ್ರಹ್ಮಪುರಿ, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ,

ಕಲ್ಪುಗಳಲ್ಲಿ ಬಲ್ಲವರಾದ ಮೂವರು ಷಡಂಗಿಗಳು, ಸಂಜೆ ಮಠದಲ್ಲಿ ಪುರಾಣ ವಾಚಿಸುವ ಪುರಾಣಭಟ್ಟ ಇತ್ಯಾದಿಯವರು ಜ್ಞಾನ ಪ್ರಸಾರ ಕಾರ್ಯದಲ್ಲಿ ನಿರಂತರವಾಗಿದ್ದು ಜೀವನೋಪಾಯಕ್ಕೆ ಅರ್ಹತೆಗನುಗುಣವಾಗಿ ಹಲವು ಮತ್ತರು ಭೂಮಿಯನ್ನು ಪಡೆಯುತ್ತಿದ್ದರು.[೨೦]

ವೇದ ಶಾಸ್ತ್ರದ ಅಧ್ಯಯನಗಳ ಜೊತೆಯಲ್ಲಿ ಚಿತ್ರಕಲೆ, ಲಲಿತ ಕಲೆಗಳಂಥ ಅನೇಕ ಮನರಂಜನೆಯ ಚಟುವಟಿಕೆಗಳನ್ನು ಅಂದು ಕಲಿಸಲಾಗುತ್ತಿತ್ತು ಎಂದು ಕ್ರಿ.ಶ. ೧೧೪೪ರ ಶಾಸನದಿಂದ ಊಹಿಸಲಾಗಿದೆ.[೨೧] ಈ ಶಾಸನದ ಅಕ್ಷರಗಳು ಅಸ್ಪಷ್ಟವಾಗಿ ಕಾಣಸಿಗುವುದರಿಂದ ವಿವರ ಅಪೂರ್ಣವಾಗಿ ದೊರೆಯುತ್ತದೆ. ಒಟ್ಟಿನಲ್ಲಿ ನಾಗಾವಿಯು ಎಲ್ಲ ರೀತಿಯ ವಿದ್ಯೆಯನ್ನು ನೀಡುವಂತಹ ಕೇಂದ್ರವಾಗಿತ್ತು ಎಂದು ತಿಳಿಯುತ್ತದೆ.

**೨.೩. ಸಾಮಾಜಿಕ ಪರಿಸರ**

ಸಾಮಾನ್ಯವಾಗಿ ಸಾಮಾಜಿಕ ಪರಿಸರವು ವ್ಯಕ್ತಿಯ ಲೌಕಿಕ ಬದುಕಿನ ಚಿತ್ರಣವನ್ನು ನೀಡುತ್ತದೆ ಎಂದರೆ ತಪ್ಪಾಗಲಾರದು. ಊಟ, ವಸತಿ, ಕುಟುಂಬ ವ್ಯವಹಾರ ಹೀಗೆ ಅನೇಕ ರೀತಿಯ ವಿಷಯಗಳ ಹೊಂದಾಣಿಕೆಯ ಕ್ರಮವು ಈ ಸಾಮಾಜಿಕ ಪರಿಸರದ ವ್ಯಾಪ್ತಿಗೆ ಬರುತ್ತವೆ. ಸಂಪ್ರದಾಯ, ಆಚರಣೆಗಳು ಸಹ ಸಾಮಾಜಿಕ ಪರಿಸರದ ಒಂದು ಅಂಗವಾಗಿವೆ. ಶಾಸನದಲ್ಲಿ ಉಲ್ಲೇಖಗೊಂಡಿರುವಂತಹ ಕೆಲವು ಆಚರಣೆಗಳನ್ನು ಗಮನಿಸಿದರೆ, ಸಾವಿರ ವರ್ಷ ಕಳೆದರೂ ಅಂತಹ ಆಚರಣೆಗಳು ಉಳಿದುಕೊಂಡು ಬಂದಿರುವುದು ಸಮಾಜವು ಸಂಪ್ರದಾಯವನ್ನು ಪರಂಪರಾಗತವಾಗಿ ಕಾಪಾಡಿಕೊಂಡಿದೆ ಎಂದು ಹೇಳಬಹುದು. ಉದಾಹರಣೆಗೆ ಶಾಸನದಲ್ಲಿ ಉಲ್ಲೇಖಿತವಾಗಿರುವಂತೆ, ದೇವಾಲಯದ ಗರ್ಭಗುಡಿಯ ದೇವತಾ ವಿಗ್ರಹದ ಮುಂದುಗಡೆಯ ರಂಗದಲ್ಲಿ ನರ್ತಕಿಯರಿಂದ ನಡೆಯುವ ಗೀತ-ನೃತ್ಯಗಳಾದ ರಂಗಭೋಗಗಳು ಸಹ ಮಧಸೂದನ ದೇವಾಲಯದಲ್ಲಿ ನಡೆಯುತ್ತಿದ್ದವು. ರಂಗಭೋಗದ ಉಪಕರಣಗಳಂತಿದ್ದ ದೇವದಾಸಿಯರ ಉಲ್ಲೇಖ ಈ ಶಾಸನದಿಂದ ತಿಳಿದುಬರುತ್ತದೆ. ಹಾಡುವ ಸಮುದಾಯದವರು ನೃತ್ಯಗೀತಾದಿಗಳಲ್ಲಿ ಪರಿಣತರಾಗಿದ್ದರು. ದೇವರ ಕಾರ್ಯಕ್ಕೆ ಮೀಸಲಾಗಿದ್ದಂತಹ ಪಾತ್ರದವರು, ನಾಲ್ವರು ಕಂಭದ ಸೂಳೆಯರು, ಈ ದೇವಾಲಯದಲ್ಲಿ ಇದ್ದು ದೇವತಾಕಾರ್ಯಕ್ಕೆ ಮೀಸಲಾಗಿದ್ದರು. ಇವರಿಗೂ ಜೀವನೋಪಾಯಕ್ಕಾಗಿ ಭೂಮಿಯನ್ನು ದತ್ತಿ ಬಿಡಲಾಗಿದ್ದಿತು. ಹೀಗೆ ಅಂದಿನ ಪದ್ಧತಿಯಂತೆ ಇಂದಿಗೂ ಸಹ ದೇವದಾಸಿ ಪದ್ಧತಿ ಇರುವುದನ್ನು ಕಾಣುತ್ತೇವೆ. ಸವದತ್ತಿ ಎಲ್ಲಮ್ಮ ನಾಗಾವಿ ಎಲ್ಲಮ್ಮ ಹಾಗೂ ವಿವಿಧ ಗ್ರಾಮದೇವತೆಗಳ ಜಾತ್ರೆಯಂದು ದೇವದಾಸಿಯರು ದೇವರ ಸೇವೆ ಮಾಡುವುದನ್ನು ಕಾಣುತ್ತೇವೆ. ಸಮಾಜದಲ್ಲಿ ಇಂತಹ ಅನೇಕ ಆಚರಣೆಗಳು ಪರಂಪರಾಗತವಾಗಿ ಬೆಳೆದುಬಂದಿರುವುದನ್ನು ತಿಳಿಯಬಹುದಾಗಿದೆ.

ಗುಂಡಬಸವೇಶ್ವರ ಚರಿತ್ರೆಯಲ್ಲಿ ಉಲ್ಲೇಖವಾಗಿರುವಂತೆ ಸಾಮಾಜಿಕ ಪರಿಸರ ಇಂದಿನಂತೆಯೇ ಇದೆ. ಈ ಕಾವ್ಯದಲ್ಲಿ ಮದುವೆ ಸಮಾರಂಭ ಮತ್ತು ಸಮಾಧಿ ಕ್ರಿಯೆಗಳನ್ನು ನೆರವೇರಿಸುವ ಉಲ್ಲೇಖಗಳು ಬರುವುದರಿಂದ ಅವು ಇಂದಿನ ಪರಿಸರವನ್ನು ಹೋಲುತ್ತವೆ. ಮದುವೆಯ ಸಮಾರಂಭದ ಚಿತ್ರಣವಂತೂ ಅಚ್ಚುಕಟ್ಟಾಗಿ ಮೂಡಿಬಂದಿದೆ. ಊಟ, ಮದುಮಕ್ಕಳನ್ನು ಶೃಂಗಾರ ಮಾಡುವುದು, ಮದುವೆಗೆ ಬರುವಂಥ ಆಯಗಾರರ ವಿವರ ಹೀಗೆ ಎಲ್ಲ ಅಂಶಗಳನ್ನು ಒಳಗೊಂಡಿದೆ.

ತಿಪ್ಪಣ್ಣಯ್ಯನ ಮದುವೆಯ ವಿವರಣೆ ಹೀಗೆ ಮೂಡಿಬಂದಿದೆ. ಮದುವೆಯ ಬೀಗರ ಊಟಕ್ಕೆ ಗೌಲಿ, ಸರಣಿ, ಸೇವೆಗೆ, ಅಂಬ ಮುಂತಾದ ಪದಾರ್ಥಗಳನ್ನು ಸಿದ್ಧಪಡಿಸಿಕೊಂಡಿದ್ದರು. ಮದುವೆ ನಿಬ್ಬಣಕ್ಕೊಂದು ಹೆಣ್ಣಿನ ಮನೆಗೆ ಅರಸುಗ್ರಾಮಕೆ ಹತ್ತೆಂಟು ಕೊಲ್ಲಾರಿ ಬಂಡಿಗಳು, ಉರಗೆಜ್ಜೆ, ಚಪುರಿ ಕಟ್ಟಿದ ಎತ್ತುಗಳು ನಡೆದವು. ಏಳುಹಿಟ್ಟು, ಎಂಟುಹಿಟ್ಟು, ರುದ್ರವಣಿಜ, ಕೈಲಾಸವಣಿಜ, ಕಲಿ ಗಮಕಿ ವಾಗ್ಮಿ, ಮದ್ದಳೆಯವರು ಸಾಗಿದರು. ಐರಾಣಿ, ಕೊಳಲು, ತಪ್ಪಟೆ, ಕಹಳೆ ವಾದ್ಯಗಳು ಮೊಳಗುತ್ತಿದ್ದವು. ಅಕ್ಕಿ, ಕಣಕ, ಎಣ್ಣೆ-ತುಪ್ಪಗಳ ಸಿದ್ಧಿಕೆ, ಬುದ್ದಲಿಗಳು, ಹಪ್ಪಳ, ಸೆಂಡಿಗೆ, ನೆಲ್ಲಿಯಚಟ್ನಿ ಉಪ್ಪಿನಕಾಯಿ, ಉಪ್ಪು, ಉಳ್ಳಾಗಡ್ಡಿ, ಮೆಣಸು, ಹುಣಿಸೆಹಣ್ಣು ಸಹಿತ ಹೊರಟರು[೩] ಎಂದು ವಿವರಣೆ ಬರುವುದನ್ನು ನೋಡಿದರೆ, ಅಂದಿನ ಸಮಾಜದಲ್ಲಿ ಊಟದ ಎಲ್ಲ ಪದಾರ್ಥಗಳನ್ನು ತೆಗೆದುಕೊಂಡು ಮದುವೆಗೆ ಬೀಗರಮನೆಗೆ ಹೋಗುವ ಪದ್ಧತಿ ಇತ್ತೆಂದು ತಿಳಿಯುತ್ತದೆ. ಸಮಾಜದ ಎಲ್ಲವೃತ್ತಿಯ ಜನರೂ ಸಹ ಮದುವೆಯ ಸಮಾರಂಭದಲ್ಲಿ ಪಾಲ್ಗೊಳ್ಳುತ್ತಿದ್ದರು ಎನ್ನುವ ಅಂಶ ತಿಳಿಯುತ್ತದೆ. ಬಾಸಿಂಗವನ್ನು ಕಟ್ಟುವುದಕ್ಕಿಂತ ಪೂರ್ವದಲ್ಲಿ ನಡೆಯುವ ಕಾರ್ಯಕ್ರಮವನ್ನು ಈ ರೀತಿಯಾಗಿ ಚಿತ್ರಿಸಿದ್ದಾರೆ. ಗಂಡಿನ ಕಡೆಯವರು ಸೀರೆ, ಕುಪ್ಪಸ, ಆಭರಣ, ಪಟ್ಟಿಗೆ ಕುಪ್ಪು, ವಾಲೆ, ಹೊನ್ನಸರಿಗೆ, ಅಪ್ಪಧಾರೆ, ಎಣ್ಣೆನೂಲು, ಮುತ್ತಿನ ಚೌಕಳಿ, ಗಿಲಿಬಿಲಿ, ಪೆತ್ತಿಸದ ಹೊನ್ನಮಣಿ, ಕೈಕಟ್ಟು, ಕಡಗ, ಹೊನ್ನೊಪ್ಪು, ಕಾಲಕಡಗ, ಕಾಲಂದುಗೆ, ಪಿಲ್ಲೆ, ಬೆಳ್ಳಿಯ ಕಾಲುಂಗರ, ವೀರಮುದ್ರೆ, ಗುಬ್ಬಿಮೆಟ್ಟಿಕೆ, ಉಡಿಯಕ್ಕಿ, ಜೀರಿಗೆ, ಮೆಣಸು, ಬೆಲ್ಲದ ಅಚ್ಚು, ಅಡಿಕೆ, ಕೊಬ್ಬರಿ, ಅರಿಷಿಣ, ಚೊಕ್ಕ, ಉಪ್ಪು, ಜೋಡು, ಕರಿಮಣಿ, ಸರಳಿಗೆ, ಶ್ಯಾವಿಗೆ, ಪರಡಿ, ಗೌಲಿ, ಜಿರಿ ಸಾಲಕ್ಕಿ, ಬೇಳೆ ಇವೆಲ್ಲ ತೆಗೆದುಕೊಂಡು ಆ ನಂತರ ಬಾಸಿಂಗ ತಂದಿರಿಸಿದರು. ನಂತರ ತಿಪ್ಪಶೆಟ್ಟಿಗೆ ಬಾಸಿಂಗವನ್ನು ಕಟ್ಟಿದರು ಎಂದು ವಿವರಣೆಯಿದೆ.[೨೪]

ಹಳ್ಳಿಗಳಲ್ಲಿ ಇಂತಹ ಆಚರಣೆಗಳು ಇಂದಿಗೂ ಇವೆ. ಮದುವೆಯ ಸಮಾರಂಭ ಒಂದು ದಿನದಲ್ಲಿ ಮುಗಿಯುವಂತಹದಲ್ಲ. ಅವು ಒಂದು ತಿಂಗಳ ಅವಧಿಯವರೆಗೆ ಸಮಾರಂಭವು ಜರುಗತ್ತಲಿದ್ದವೆಂಬುದನ್ನು ಈ ಕಾವ್ಯ ಕರಾರುವಕ್ಕಾಗಿ ಸಾಕ್ಷೀಕರಿಸುತ್ತದೆ.

ಇಲ್ಲಿ ಮದುವೆ ಸಡಗರಗಳ ಚಿತ್ರಣವಿದ್ದು ಏಳುಹಿಟ್ಟು, ಎಂಟುಹಿಟ್ಟು, ರುದ್ರವಣಿಜ, ಕೈಲಾಸವಣಿಜ ಪದಗಳು ಸಾಂಸ್ಕೃತಿಕವಾಗಿ ತುಂಬಾ ಮಹತ್ವವೆನಿಸಿವೆ. ಹಿಟ್ಟು ಎನ್ನುವುದು ಹಳ್ಳಿಯ ಆಯಗಾರರ ಪರ್ಯಾಯ ನಾಮ, ಕೈಲಾಸವಣಿಜವೆಂಬುದು ಕೈಲಾಸ ಧ್ವಜದ (ಗುಡ್ಡಧ್ವಜದ) ವ್ಯಾಪಾರಗಳನ್ನು, ರುದ್ರವಣಿಜನೆಂಬುದು ವೀರಬಣಂಜ (ವ್ಯಾಪಾರಿಗಳ ಸೈನ್ಯ) ಸಂಸ್ಥೆಯನ್ನು ಸೂಚಿಸುವಂತಿದೆ.[೨೫]

ಗುಂಡಬಸವಣ್ಣನ ಮದುವೆಯ ಸಮಾರಂಭದ ಚಿತ್ರಣವು ಉಲ್ಲೇಖಗೊಂಡಿರುವುದನ್ನು ಕಾಣುತ್ತೇವೆ. ಬಸವಣ್ಣನಿಗೆ ಗುಂಡಗುರಕಿ ಗ್ರಾಮದ ಶಂಕರಶೆಟ್ಟಿ ಮತ್ತು ಲಕ್ಕಾಯಿ ಅವರ ಮಗಳನ್ನು ಮದುವೆಯ ನಿಶ್ಚಯ ಮಾಡಿ, ಕನ್ನೆಗೆ ಕುಪ್ಪಸವನ್ನು ತೊಡಿಸಿ ಮರಳಿ ನಾಗಾವಿಗೆ ಬಂದು ವಿವಾಹ ವ್ಯವಸ್ಥೆಯನ್ನು ಆರಂಭಿಸಿದರು. ನಂತರ ಕೋರೂಟ ಮದುಮಗಳಿಗೆ ನೀರೆರೆಯುವ ಕ್ರಿಯೆ ಜರುಗಿದವು. ತಾಯಿ ಮಕ್ಕಳು ಮೀಯುವುದಕ್ಕಾಗಿ ಕಳಸವನ್ನಿಟ್ಟು ನೂಲು ಸುತ್ತಿದರು. ಮದುವಣಿಗ ಮಿಂದ ಬಳಿಕ, ಅವನಿಗಾಗಿ ಎಣ್ಣೆ ಹೋಳಿಗೆ, ಪಾಯಸದ

ಅನ್ನವತ್ತಿಗೆ ತುಂಬಿದರು. ನಿಬ್ಬಣ ಮುಗಿಸಿ ಮದುವೆ ಮುಗಿದು ಮನೆ ತುಂಬಿದರು. ಹಳ್ಳಿಗಳಲ್ಲಿ ಈಗಲೂ ಜರುಗುತ್ತಲಿರುವ ಇಲ್ಲಿಯ ಮದುವೆಯ ವಿವರಗಳು ಅಪೂರ್ವವೆನಿಸಿವೆ.

ಸಾಮಾಜಿಕ ಕ್ರಿಯೆಯಲ್ಲಿ ಪ್ರಮುಖವೆನಿಸುವಂತದ್ದು ಶವಸಂಸ್ಕಾರ ಪದ್ಧತಿ. ಈ ಪದ್ಧತಿಯು ವಿವಿಧ ಧರ್ಮೀಯರಲ್ಲಿ ಬೇರೆ ಬೇರೆಯಾಗಿರುತ್ತದೆ. ಗುಂಡಬಸವೇಶ್ವರ ಚರಿತ್ರೆಯಲ್ಲಿ ಬರುವ ತಿಪ್ಪಣ್ಣಯ್ಯ ಮತ್ತು ಗುಂಡಬಸವೇಶ್ವರರು ವೀರಶೈವ ಬಣಜಿಗರಾಗಿರುವುರಿಂದ ಮತ್ತು ಆರೂಢ ಮಾದರಿಯ ಶರಣರಾಗಿರುವುದರಿಂದ ಗವಿಯನ್ನು ಮಾಡಿ ಸಮಾಧಿಯನ್ನು ರಚಿಸಿ ನಂತರ ಮೇಲೆ ಗೋಪುರ ನಿರ್ಮಾಣ ಮಾಡುವ ಪದ್ದತಿಯನ್ನು ಕಾಣುತ್ತೇವೆ. ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಗುಂಡ ಬಸವಣ್ಣನ್ನು ಸಮಾಜದ ಶಾಸ್ತ್ರಗಳಿಗೆ ಸ್ವಲ್ಪ ಭಿನ್ನಧೋರಣೆಯನ್ನು ತಳೆದಿರುವುದನ್ನು ಕಾಣುತ್ತೇವೆ. ಗುಂಡಬಸವಣ್ಣ ಪ್ರಾಣವನ್ನು ಬಿಡುವ ಸಂದರ್ಭದಲ್ಲಿ ತಿಪ್ಪಣ್ಣಯ್ಯನ ಗದ್ದಿಗೆಯ ಹತ್ತಿರ ಗವಿಯನ್ನು ನಿರ್ಮಾಣ ಮಾಡಲು ಹೇಳುತ್ತಾನೆ. ನಂತರ ತನ್ನ ಹೆಂಡತಿಯರನ್ನು ಕರೆದು, ಕರಿಮಣಿ ಓಲೆ, ತೋಡೆಗಳನ್ನು ಬಿಚ್ಚಬೇಡಿರೆಂದು ಹೇಳುತ್ತಾನೆ. ಗಂಡನು ತೀರಿದ ಮೇಲೆ ಹೆಂಡತಿಯರು ಕರಿಮಣಿ ಓಲೆಯನ್ನು ಧರಿಸದೇ ಇರುವುದು ಇಂದಿಗೂ ಪ್ರಚಲಿತದಲ್ಲಿದೆ. ಗುಂಡಬಸವಣ್ಣ, ದೈವೀ ಪುರುಷನಾದ ಕಾರಣ ಅಂತಹ ಪದ್ಧತಿಯನ್ನು ಬಿಡಬೇಕೆಂದು ಸೂಚನೆಯನ್ನು ಕೊಟ್ಟಂತಿದೆ. ಅದೇನೆ ಇರಲಿ ಸಮಾಜವನ್ನು ವೈಚಾರಿಕವಾಗಿ ಬೆಳೆಸುವ ಮತ್ತು ಸ್ತ್ರೀ ಸ್ವಾತಂತ್ರ್ಯವನ್ನು ಹುಟ್ಟುಹಾಕುವ ಹಿನ್ನೆಲೆಯಲ್ಲಿ ಈ ಕಾವ್ಯ ಉತ್ತಮ ಸಮಾಜಶಾಸ್ತ್ರೀಯ ಮಹತ್ವವನ್ನು ಪಡೆಯುತ್ತದೆ.

ಅಂದಿನ ಸಮಾಜದಲ್ಲಿ ವ್ಯಾಪಾರ ಮಾಡುವಂತವರು ಹೆಚ್ಚಾಗಿದ್ದರು ಮತ್ತು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವ್ಯಾಪಾರಕ್ಕೆಂದು ಹೋಗುತ್ತಿದ್ದರು ಎಂಬುದನ್ನು ಕಾಣುತ್ತೇವೆ. ಗುಂಡ ಬಸವಣ್ಣನು ಬಣಜಿಗ ಶೆಟ್ಟಿಯ ವಂಶದವನಾಗಿದ್ದರಿಂದ, ಮದುವೆಯ ನಂತರ ಅವನನ್ನು ವ್ಯಾಪಾರಕ್ಕೆಂದು ಕಳಿಸುತ್ತಾರೆ. ಗುಂಡ ಬಸವಣ್ಣ ವ್ಯಾಪಾರಕ್ಕೆ ಹೋಗುವ ದೃಶ್ಯ ಹೀಗಿದೆ.

ಹಸುಬೆಯ ಬಣಗಿಸಿಯೆನೆಂದು ಎನುತಲಿ
ಬಸವಣ್ಣ ತಾ ಕೈಕೊಂಡು
ವಸುಧೆಯೊಳಗೆ ಉಳ್ಳ ಎಪ್ಪತ್ತೆರಡು ಕೋಣೆ
ಹಸುಬೆಯನಾಗ ತುಂಬಿದನು.[೨೬]

ಹೀಗೆ ವ್ಯಾಪಾರಕ್ಕೆ ಹೋದ ಸಂದರ್ಭದಲ್ಲಿ ಬೆನ್ನಟ್ಟಿದ ಕಳ್ಳರಿಂದ ಪಾರಾಗುತ್ತಾನೆ. ಸಮಾಜದಲ್ಲಿ ಕೆಟ್ಟವರೂ ನಿಂದಕರು ದರೋಡೆಕೋರರು ಎಲ್ಲ ಕಾಲದಲ್ಲಿಯೂ ಇರುತ್ತಾರೆ ಎಂಬುದಕ್ಕೆ ಇದು ಸಾಕ್ಷಿಯಾಗಿದೆ.

ಬೆಲ್ಲ ಕೊಬ್ಬರಿ ತಿಂದು ಸೊಕ್ಕಿದ ಬಣಜಿಗ
ನಿಲ್ಲದೇ ಕುಣಿದಾಡು ತಿಹನೆ
ಸೊಕ್ಕಿದ ಬಣಜಿಗ ಹಕ್ಕಾಗಿರದೇ ತಾ
ಹೊಕ್ಕನೇತಕೆ ಇಲ್ಲಿ ಎನುತ[೨೭]

ಎಂದು ದೂಷಕರು ಜಾತಿ ಎತ್ತಿ ಬಯ್ಯುವುದನ್ನು ಇಲ್ಲಿ ಗಮನಿಸಬಹುದು. ಮಡಿ ಮೈಲಿಗೆ ಬಹು ಹಿಂದಿನಿಂದ ಬಂದಿರುವಂತೆ ಜಾತಿಯಲ್ಲಿ ಮೇಲು ಕೀಳೆಂಬುದು ಪರಂಪರಾಗತವಾಗಿ ಬೆಳೆದು ಬಂದಿದೆ. ಜಾತಿಯ ನಿಂದನೆ ಎನ್ನುವಂತದ್ದು ಸಮಾಜದ ಅವಿಭಾಜ್ಯವಾಗಿಬಿಟ್ಟಿದೆ.

ಒಟ್ಟಿನಲ್ಲಿ ನಾಗಾವಿಯಲ್ಲಿ ಸಾಮಾಜಿಕ ಜನಜೀವನ ಬಹಳ ಸುಧಾರಿತವಾಗಿದ್ದಿತು ಎನ್ನುವುದಂತು ಸತ್ಯ ಸಂಗತಿಯಾಗಿದೆ. ಅಗ್ರಹಾರವಾಗಿ, ಘಟಿಕಾಲಯವೂ, ಧರ್ಮಕಲ್ಯಾಣವಾಗಿ ನಾಗಾವಿಯು ಉತ್ತಮವಾದಂತಹ ಸಾಮಾಜಿಕ ಪರಿಸರವನ್ನು ಹೊಂದಿತ್ತು ಎಂದು ಹೇಳಬಹುದಾಗಿದೆ.

**೨.೪. ಧಾರ್ಮಿಕ ಪರಿಸರ**

ನಾಗಾವಿಯನ್ನು ವ್ಯವಸ್ಥಿತವಾದ ಘಟಿಕಾಸ್ಥಾನ ಕೇಂದ್ರವಾಗಿದ್ದುದಲ್ಲದೆ. ಅದಕ್ಕಿಂತ ಮುಂಚೆ ಜೈನ ಮತದ ಕೇಂದ್ರವೂ ಆಗಿತ್ತು ಎಂಬುದಾಗಿ ತಿಳಿದು ಬಂದಿದೆ. ನಾಗಾವಿಯ ಈಗಿನ ಮಧುಸೂದನ ದೇವಾಲಯದ ಹಿಂಬದಿಯ ಅರ್ಧ ಕಿ.ಮೀ. ಅಂತರದಲ್ಲಿ ಪಾಳುಬಿದ್ದ ಕಟ್ಟಡಗಳ ಅವಶೇಷಗಳು ಎಲ್ಲ ಕಡೆ ಹರಡಿದ್ದು ಇತ್ತೀಚೆಗೆ ಪತ್ತೆಹಚ್ಚಿದ್ದಾರೆ.[೫] ಇಲ್ಲಿ ಅವಶೇಷಗಳನ್ನು ಕೆದಕಿ ಪರಿಶೀಲಿಸಿದಾಗ ಜೈನತೀರ್ಥಂಕರ ವಿಗ್ರಹ ಹಾಗೂ ಇನ್ನಿತರ ಕುರುಹುಗಳು ಕಂಡುಬಂದಿರುವುದಾಗಿ ತಿಳಿಯುತ್ತದೆ. ಈ ಅವಶೇಷಗಳು ದೊರೆತಿರುವಂತಹ ಸ್ಥಳವನ್ನು ಉತ್ಖನನ ಮಾಡಿದರೆ ಜೈನಧರ್ಮಕ್ಕೆ ಸಂಬಂಧಿಸಿದ ಮತ್ತಷ್ಟು ಅವಶೇಷಗಳು ದೊರೆಯುವ ಸಾಧ್ಯತೆ ಇದೆ. ಹೀಗಾಗಿ ನಾಗಾವಿಯು ಅಗ್ರಹಾರ ಘಟಿಕಾಲಯವಾಗುವುದಕ್ಕಿಂತ ಪೂರ್ವದಲ್ಲಿ ಜೈನಧರ್ಮದ ಕೇಂದ್ರವೂ ಆಗಿದ್ದಿತು ಎಂಬಲ್ಲಿ ಸಂದೇಹವೇ ಇಲ್ಲ. ೮, ೯ ಹಾಗೂ ೧೦ನೇ ಶತಮಾನದ ಅವಧಿಯಲ್ಲಿ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಷ್ಟ್ರಕೂಟರು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಜೈನಧರ್ಮವು ಪ್ರಮುಖ ಸ್ಥಾನವನ್ನು ಗಳಿಸಿಕೊಂಡದ್ದನ್ನು ಆ ಕಾಲದ ಶಾಸನಗಳು ಸಮರ್ಥಿಸಿವೆ. ಮಾನ್ಯಖೇಟದ ಪರಿಸರದಲ್ಲಿ ನಾಗಾವಿ ಇದ್ದುದರಿಂದ ಜೈನಧರ್ಮ ಕೇಂದ್ರವಾಗಿದ್ದಿತು ಎಂದು ಹೇಳಬಹುದು.

ರಾಷ್ಟ್ರಕೂಟರ ನಂತರ ನಾಗಾವಿಯಲ್ಲಿ ಆಡಳಿತ ನಡೆಸಿದವರು ಕಲ್ಯಾಣಿ ಚಾಲುಕ್ಯರ ಸಾಮಂತ ಅರಸರು. ಅರಲು ಮುನ್ನೂರನ್ನು ಆಳುತ್ತಿದ್ದ ದಂಡನಾಯಕರು ನಾಗಾವಿಯ ಪರಿಸರದಲ್ಲಿ ಅನೇಕ ದೇವಾಲಯಗಳನ್ನು ಕೆರೆ-ಕುಂಟೆಗಳನ್ನು ಕಟ್ಟಿಸಿದ್ದಾರೆ. ನಾಗಾವಿ ಪ್ರದೇಶದಲ್ಲಿ ಕಂಡುಬರುವ ಹಲವಾರು ದೇವಾಲಯಗಳು ವಿಭಿನ್ನ ರೀತಿಯ ಕಲಾ ಕೌಶಲ್ಯದಿಂದ ಕೂಡಿವೆ. ಇಲ್ಲಿನ ಒಂದೆರಡು ದೇವಾಲಯಗಳು ವಿಶಿಷ್ಟ ಶೈಲಿಯಲ್ಲಿ, ರಚನೆಯಾಗಿದ್ದವಾದರೂ, ಇಂದು ಪಾಳುಬಿದ್ದಿವೆ. ನಾಗಾವಿಯ ಪರಿಸರದ ತ್ರೈಪುರುಷ ದೇವಾಲಯ ಹಾಗೂ ಮಧುಸೂದನಾಲಯಗಳ ಅಧಿಷ್ಠಾನ ಭಾಗವು ಸುಂದರವಾದ ವಿನ್ಯಾಸದಲ್ಲಿದ್ದು, ನಕ್ಷತ್ರಾಕಾರವನ್ನು ಹೋಲುತ್ತವೆ. ಸ್ಥಳೀಯ ಬಿಳಿ ಕಲ್ಲನ್ನು ಬಳಸಿಕೊಂಡೇ ಈ ಅಧಿಷ್ಠಾನವನ್ನು ನಿರ್ಮಿಸಿದೆ. ಚಾಲುಕ್ಯ ಶೈಲಿಯ ವಿಶೇಷತೆ ಎಂದು ಹೇಳಲಾಗುವ ಸುಂದರವಾದ ಕುಶಲ ಕಂಬಗಳಿಂದ ನಿರ್ಮಿತವಾದ ದೇವಾಲಯವನ್ನು ಕಾಣುತ್ತೇವೆ.

ನಾಗಾವಿಯ ಪರಿಸರದಲ್ಲಿ ಇಂದು ಕಂಡುಬರುವ ಪ್ರಮುಖ ದೇವಾಲಯಗಳು, ವೇಳಾಂಬ ದೇವಾಲಯ (ಎಲ್ಲಮ್ಮ), ತ್ರೈಪುರುಷ ದೇವಾಲಯ, ರಾಮೇಶ್ವರ ದೇವಾಲಯ, ಲಕ್ಷ್ಮಣೇಶ್ವರ ದೇವಾಲಯ, ಸಿದ್ಧೇಶ್ವರ

ದೇವಾಲಯ, ಆಂಜನೇಯ ದೇವಾಲಯ, ಈರಪ್ಪಯ್ಯನ ಗದ್ದುಗೆ, ಮಧುಸೂದನಾಲಯ, ಮಹಮ್ಮದೀಯರ ಆಳ್ವಿಕೆಯಲ್ಲಿ ಪರಿವರ್ತನೆಗೊಂಡಿರುವ ಕರಿಮಸೀದಿ, ಜುಮ್ಮಾಮಸೀದಿ ಪ್ರಮುಖವಾದ ವಾಸ್ತುರಚನೆಗಳಾಗಿವೆ. ಪಾಳುಬಿದ್ದಿರುವ ಅನೇಕ ದೇವಾಲಯಗಳು ಈ ನಾಗಾವಿಯ ಪರಿಸರದಲ್ಲಿವೆ. ಈಗ ಇರುವಂತಹ ಕೆಲವು ದೇವಾಲಯಗಳ ವಿವರ ಈ ಕೆಳಗಿನಂತಿವೆ.

**ತ್ರೈಪುರುಷ ದೇವಾಲಯ**

ಕ್ರಿ.ಶ. ೧೦೫೮ರ ಶಾಸನದ ಪ್ರಕಾರ ಈ ದೇವಾಲಯವನ್ನು ಮಧುವರಸ ದಂಡನಾಯಕನು ಕಟ್ಟಿಸಿದನೆಂದು ಹೇಳಲಾಗುತ್ತದೆ.[10] ನಾಗಾವಿಯ ಪ್ರದೇಶದಲ್ಲಿ ಈ ದೇವಾಲಯವು ಅತ್ಯಂತ ಮಹತ್ವದ್ದಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ ಹಾಗೂ ವಿಶಾಲವಾದ ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಅಖಂಡ ತ್ರೈಪುರುಷ ಪೀಠವಿದ್ದು, ಇಂದು ಮೂರ್ತಿಗಳು ಕಂಡುಬರುವುದಿಲ್ಲ. ಗರ್ಭಗೃಹದ ಬಾಗಿಲ ಚೌಕಟ್ಟು ಐದು ಪಟ್ಟಿಗಳನ್ನು ಹೊಂದಿದ್ದು ಆಕರ್ಷಕ ಅಲಂಕಾರದಿಂದ ಕೂಡಿದೆ. ವಿಶಾಲವಾದ ಸಭಾಮಂಟಪವು ನಾಲ್ಕು ಮಾದರಿಯ ೯೦ ಕಂಬಗಳನ್ನು ಹೊತ್ತು ನಿಂತಿದೆ. ನಡುವೆ ಇರುವ ಒಂದು ಅಂಕಣ ಆಯತಾಕಾರದ ತೊಟ್ಟಿಯು ಗಮನಾರ್ಹವಾಗಿದೆ. ಹಿಂದೆ ಈ ದೇವಾಲಯವು ಎರಡು ಅಂತಸ್ತುಗಳೊಂದಿಗೆ ಸುಂದರವಾದ ಗೋಪುರವನ್ನು ಹೊಂದಿತ್ತು ಎಂದು ಶಾಸನ ವರ್ಣಿಸಿದೆ. ಇದುವೇ ಪ್ರಾಚೀನ ಕಾಲದಲ್ಲಿಯ ವೇದಾಧ್ಯಯಿಗಳಿಂದ ಕೂಡಿದ ಶಾಲೆಯಾಗಿದ್ದು, ಘಟಿಕಾ ಸ್ಥಾನವೆಂಬ ಹೆಗ್ಗಳಿಕೆಗೂ ಪಾತ್ರವಾಗಿದ್ದಿತು. ಈಗ ಸ್ಥಳೀಯ ಇದನ್ನು ೬೦ ಕಂಬದ ದೇವಾಲಯವೆಂದು ಕರೆಯುತ್ತಾರೆ. ಈ ದೇವಾಲಯದ ಮುಂದುಗಡೆ ಕ್ರಿ.ಶ. ೧೦೫೮ರ ಶಾಸನವಿದೆ. ಈ ಶಾಸನದ ನಾಲ್ಕು ಮುಖದಲ್ಲಿ ರಚನೆಗೊಂಡು ಆಗಿನ ಘಟಿಕಾಸ್ಥಾನದ ವಿದ್ಯಾರ್ಥಿ, ಉಪಧ್ಯಾಯರ ವಿವರ ಹಾಗೂ ಶೈಕ್ಷಣಿಕ ವಿಷಯಗಳನ್ನು ತಿಳಿಸುತ್ತದೆ.

**ನಾಗವೇಲಾಂಬಿಕೆ (ನಾಗಾಯಿ ಎಲ್ಲಮ್ಮ)**

ರಾಷ್ಟ್ರಕೂಟರ ಕುಲದೇವತೆಯಾಗಿದ್ದ ವೇಳಾಂಬ ದೇವತೆ ಇಂದು ನಾಗವೇಲಾಂಬ ಎಂಬ ಹೆಸರಿನಿಂದ ಪೂಜೆಗೊಳ್ಳುತ್ತಿದ್ದಾಳೆ. ಇತ್ತೀಚೆಗೆ ನಾಗಾಯಿ ಎಲ್ಲಮ್ಮ ಎಂದು ಕರೆಯುತ್ತಿದ್ದಾರೆ. ಪ್ರಾರಂಭದಲ್ಲಿ ಈ ದೇವಾಲಯವು ಗರ್ಭಗುಡಿಯನ್ನು ಮಾತ್ರ ಹೊಂದಿದ್ದು ನಂತರ ವಿಶಾಲವಾಗಿ ವಿಸ್ತರಣೆಗೊಂಡಂತೆ ಕಂಡುಬರುತ್ತದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು, ಗರ್ಭಗೃಹ, ತೆರೆದ ಅಂತರಾಳ, ನವರಂಗ ಹಾಗೂ ಅರ್ಧಮಂಟಪಗಳನ್ನು ಹೊಂದಿದೆ. ಮುಂದೆ ವಿಸ್ತರಣೆಯ ಸಂದರ್ಭದಲ್ಲಿ ನವರಂಗದ ಮುಂಭಾಗದಲ್ಲಿ ವಿಶಾಲವಾಗಿದೆ. ಗರ್ಭಗೃಹದಲ್ಲಿ ದೇವಿಯ ಶಿಲ್ಪ ಮತ್ತು ಪಾದುಕೆಗಳಲ್ಲದೆ ಎರಡು ನಿರೀನ ಬುಗ್ಗೆಗಳಿವೆ. ಈ ಗರ್ಭಗೃಹದೆದುರಿಗೆ ಮಾತಂಗಿ ಗ್ರಾಮದೇವತಾ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದ್ದು, ಎದುರಿಗೆ ನಾಗರಕಟ್ಟೆಯೊಂದಿದೆ. ನವರಾತ್ರಿಯ ವೇಳೆಯಲ್ಲಿ ಒಂಬತ್ತು ದಿನಗಳ ಕಾಲ ಇಲ್ಲಿ ದೀಪೋತ್ಸವದೊಂದಿಗೆ ನವರಾತ್ರಿ ಉತ್ಸವ ಅತೀ ವಿಜೃಂಬಣೆಯಿಂದ ಜರುಗುತ್ತದೆ. ದೇವಾಲಯದ ಆವರಣದ ಸುತ್ತಲೂ ಮಂಟಪಗಳಿವೆ.

ಭಕ್ತರು ಅಪಾರ ಸಂಖ್ಯೆಯಲ್ಲಿ ಹುಣ್ಣಿಮೆಯಂದು ಆಗಮಿಸುತ್ತಾರೆ. ದೇವಾಲಯದ ಮುಂಭಾಗದಲ್ಲಿ ಇರುವ ಬಾವಿಯಲ್ಲಿ ಸ್ನಾನ ಮಾಡಿದರೆ ಪಾಪ ಪರಿಹಾರವಾಗುವುದೆಂದು ಇಂದಿಗೂ ಜನ ನಂಬುತ್ತಾರೆ.

### ಲಕ್ಷ್ಮಣೇಶ್ವರ ದೇವಾಲಯ

ಲಕ್ಷ್ಮಣೇಶ್ವರ ದೇವಾಲಯವು ಶಾಸನದಲ್ಲಿ ಉಲ್ಲೇಖಗೊಂಡಿರುವಂತೆ ಈ ದೇವಾಲಯವನ್ನು ಕಾಳಿದಾಸ ದಂಡನಾಯಕನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಪಶ್ಚಿಮಾಭಿಮುಖವಾಗಿಸುವ ಈ ದೇವಾಲಯವು ಗರ್ಭಗೃಹ ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಈ ದೇವಾಲಯವು ಇಂದು ಸಂಪೂರ್ಣವಾಗಿ ದುರಸ್ತಿಯಲ್ಲಿದೆ. ಈ ದೇವಾಲಯದ ಹೊರಗೋಡೆಯ ಮೇಲೆ ಗದ್ಯಶಾಸನದ ಫಲಕವಿದೆ. ಈ ಶಾಸನವನ್ನು ಅಡ್ಡವಾಗಿ ಹನ್ನೆರಡು ಸಾಲುಗಳಲ್ಲಿ ಕೆತ್ತಲಾಗಿದೆ. ಶಾಸನದ ಅಕ್ಷರಗಳು ಇಂದು ಮುಸುಕಾಗಿವೆ.

### ರಾಮೇಶ್ವರ ದೇವಾಲಯ

ಈ ದೇವಾಲಯವು ಹಳ್ಳದ ದಂಡೆಯಂಚಿನಲ್ಲಿದೆ. ಹಿಂದೆ ಈ ಹಳ್ಳಕ್ಕೆ ಸವಳದ ಹಳ್ಳವೆಂದು ಕರೆಯುತ್ತಿದ್ದರಂತೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹ, ಅಂತರಾಳವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ರಾಮೇಶ್ವರ ಲಿಂಗವಿದೆ. ತೆರೆದ ನವರಂಗದಲ್ಲಿ ಬೃಹತ್ ನಂದಿಯ ವಿಗ್ರಹವಿದ್ದು, ಬಲಭಾಗದಲ್ಲಿ ಗೋಡೆಗೆ ತಾಕಿದಂತೆ ಐದು ಹೆಡೆಗಳುಳ್ಳ ನಾಗಕನ್ನೆಯ ಶಿಲ್ಪವಿದೆ. ಇಂದು ಈ ದೇವಾಲಯದಲ್ಲಿ ಸಾಧುಗಳು ವಾಸಿಸುತ್ತಿದ್ದು ಪೂಜೆ ಮಾಡುತ್ತಾರೆ. ಈ ದೇವಾಲಯವನ್ನು ಮಧುವರಸಪ್ಪ ದಂಡನಾಯಕನು ಸ್ಥಾಪಿಸಿದನೆಂದು ಶಾಸನದಲ್ಲಿ ಹೇಳಿದೆ.[೨೯]

### ನಂದಿಕೇಶ್ವರ ದೇವಾಲಯ

ನಂದಿಕೇಶ್ವರ ದೇವಾಲಯವು ೧೬ ಕಂಬದ ದೇವಾಲಯವಾಗಿದೆ. ದೇವಾಲಯದ ಹಿಂದುಗಡೆ ನಂದಿಬಾವಿಯಿದೆ. ಈ ನಂದಿಬಾವಿಯು ಬಹಳ ಪುರಾತನ ಕಾಲದ್ದೆಂದು ಜನರ ನಂಬಿಕೆಯಾಗಿದೆ. ನಂದೀಶ್ವರ ದೇವಾಲಯದಲ್ಲಿ ಗರ್ಭಗುಡಿಯ ಶಿವಲಿಂಗವಿದ್ದು ಮುಂದುಗಡೆ ಒಂದು ಸಣ್ಣ ಮತ್ತು ದೊಡ್ಡನಂದಿ ವಿಗ್ರಹಗಳಿವೆ. ದೊಡ್ಡ ನಂದಿವಿಗ್ರಹವು ಭಗ್ನಗೊಂಡಿದ್ದು ಸಣ್ಣನಂದಿಯು ಯಥಾ ಸ್ಥಿತಿಯಲ್ಲಿದೆ.

### ಕಡಲೆ ಬಸವಣ್ಣ ದೇವಾಲಯ (ಸಿದ್ಧೇಶ್ವರ ದೇವಾಲಯ)

ಹಿಂದೆ ಸಿದ್ಧೇಶ್ವರ ದೇವಾಲಯ ಎಂದು ಕರೆಯುತ್ತಿದ್ದ ಈ ದೇವಾಲಯ ಇಂದು ಕಡಲೆ ಬಸವಣ್ಣ ದೇವಾಲಯ ಎಂದು ಕರೆಯಲ್ಪಡುತ್ತಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ, ತೆರೆದ ನವರಂಗ ಹಾಗೂ ನಂದಿ ಮಂಟಪಗಳನ್ನು ಒಳಗೊಂಡಿದೆ. ಈ ದೇವಾಲಯದ ತೆರೆದ ನವರಂಗದಲ್ಲಿ ಕ್ರಿ.ಶ. ೧೧೯೪ರ ಶಾಸನದಿಂದ ಇದೇ ಶಾಸನೋಕ್ತ ಸಿದ್ಧೇಶ್ವರ ಮಠವೆಂದು ತಿಳಿದುಬರುತ್ತದೆ. ಇಲ್ಲಿರುವ ಶಿಲಾಶಾಸನವು ಕ್ರಿ.ಶ. ೧೧೯೩ ಮತ್ತು ಕ್ರಿ.ಶ. ೧೧೮೪ ಎಂಬ ಎರಡು ಕಾಲಘಟ್ಟಗಳಲ್ಲಿ ಬರೆಯಲ್ಪಟ್ಟಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗವಿದೆ. ನವರಂಗವನ್ನು ಪ್ರವೇಶಿಸಿಲು ಉತ್ತರ ಮತ್ತು ದಕ್ಷಿಣದ ಕಡೆಗಳಿಂದ

ದ್ವಾರಗಳಿದ್ದು ಇದಕ್ಕೆ ಹೊಂದಿಕೊಂಡಂತೆ ನಂದಿ ಮಂಟಪವೊಂದಿದೆ. ಮಂಟಪದಲ್ಲಿ ಕುಳಿತಿರುವ ಬೃಹದಾಕಾರದ ನಂದಿ ವಿಗ್ರಹವಿದೆ. ಅಲ್ಲಲ್ಲಿ ಭಗ್ನಗೊಂಡಿದ್ದರೂ ಅವರ ಕೆತ್ತನೆ ಸುಂದರವಾಗಿದೆ. ಹಿಂದೆ ಇದೊಂದು ಮಠವಾಗಿದ್ದು ಅನೇಕ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತಿದ್ದವು. ಇಲ್ಲಿ ಸದಾಕಾಲ ಧಾರ್ಮಿಕ ಕಾರ್ಯಗಳು ನಡೆಯಲೆಂದು ಚಾಲುಕ್ಯರಸ ಆರನೇ ವಿಕ್ರಮಾದಿತ್ಯನ ರಾಣಿ ಕೇತಲಾದೇವಿ ಸಿದ್ಧೇಶ್ವರ ದೇವರ ಪೂಜೆಗೆಂದು ಭೂಮಿ, ಎಣ್ಣೆಯ ಗಾಣಗಳನ್ನು ದತ್ತಿಬಿಟ್ಟಿದ್ದಳು ಎನ್ನುವ ವಿಷಯ ಇಲ್ಲಿನ ಶಾಸನದಿಂದ ತಿಳಿಯಬಹುದಾಗಿದೆ.

**ಗುಂಡುರಾವ್ ದೇವಾಲಯ (ವೈಷ್ಣವ ದೇವಾಲಯ)**

ಗುಂಡುರಾವ್ ದೇವಾಲಯ ಅಥವಾ ವೈಷ್ಣವ ದೇವಾಲಯ ಎಂದು ಕರೆಯುವ ಈ ದೇವಾಲಯ ಸುಮಾರು ೧೧ನೆಯ ಶತಮಾನದ್ದಿರಬಹುದು. ಇದು ನಾಗಾವಿ ಪರಿಸರದ ದೇವಾಲಯಗಳಲ್ಲಿಯೇ ಅತ್ಯಂತ ಸುಂದರವಾದ ಸೂಕ್ಷ್ಮ ಕೆತ್ತನೆಯನ್ನು ಒಳಗೊಂಡಿದೆ. ಇಂದು ಗರ್ಭಗೃಹ ಅಂತರಾಳಗಷ್ಟೆ ಉಳಿದಿದ್ದು ನವರಂಗ ಭಾಗವು ಬಿದ್ದುಹೋಗಿದೆ. ಗರ್ಭಗೃಹದಲ್ಲಿ ಬೃಹತ್ತಾದ ಪೀಠವೊಂದಿದ್ದು, ದೇವಾಲಯದ ಬಾಗಿಲ ಚೌಕಟ್ಟು ಆರು ಪಟ್ಟಿಕೆಗಳನ್ನು ಹೊಂದಿದೆ. ದೇವಾಲಯದ ಒಳಗೆ ಗೋಡೆಯ ಮೇಲೆ ಶ್ರೀ ಸದ್ಗುಗುರು ಗುಂಡೇಶ್ವರ ಮಹಾರಾಜ ಎನ್ನುವಂತ ಕೈ ಬರಹಗಳನ್ನು ಕಾಣುತ್ತೇವೆ.

**ಈರಪ್ಪಯ್ಯನ ಗದ್ದುಗೆ**

ಕೊಡೇಕಲ್ಲ ಬಸವಣ್ಣ ದೇಶಪರ್ಯಟನೆ ಮಾಡುತ್ತ ಅಮರಕಲ್ಯಾಣದ ಪರ್ಯಾಯ ನಾಮವಾದ ಹಳೆಯ ಸಗರಕ್ಕೆ ಬರುತ್ತಾನೆ. ಆ ಹೊತ್ತಿಗೆ ಸಂಗಮನಾಥ 'ಸತ್ತು ಹೋಗಿದ್ದ.'[೧೦] ಅವನ ಕುಟುಂಬದವರು ಧರ್ಮ ಬೋಧೆಯನ್ನು ಉಪಜೀವನದ ಮಾಧ್ಯಮ ಮಾಡಿಕೊಂಡು ಬಾಳುತ್ತಿದ್ದರು. ಕೊಡೇಕಲ್ಲ ಬಸವಣ್ಣ ಈ ಸಂಗಮನಾಥನ ಗದ್ದುಗೆ ದರ್ಶನ ಪಡೆದು ಈಶ್ಯಾನ್ಯಕ್ಕೆ ನಡೆದು ಹಳೆಯ ಸಗರದಿಂದ (ಡಿಗ್ಗಿ) ನಾಗಾವಿಗೆ ಬರುತ್ತಾನೆ. ಅಲ್ಲಿ ಗುಂಡಬಸಪ್ಪನ ಮನೆಗೆ ಹೋಗಿ ಭಿಕ್ಷೆ ಬೇಡುತ್ತಾನೆ. ಗುಂಡಬಸಪ್ಪನ ಹೆಂಡತಿಯು ನೀಡಲು ಸಿದ್ಧ ಅಡುಗೆ ಉಳಿದಿಲ್ಲವೆಂದು ಹೇಳುತ್ತಾಳೆ. ಆಗ ಕೊಡೇಕಲ್ಲ ಬಸವಣ್ಣ ಶಿವನು ನೀಡಿದ ಬಹುದಿನದ ಕಜ್ಜಾಯವಿದೆ ನೀಡಿ ಎಂದು ಹೇಳಿ ಹೋಗುತ್ತಾನೆ. ನಂತರ ಮಗ ಈರಪ್ಪಯ್ಯ ಮನೆಗೆ ಬಂದಾಗ ಅವನ ತಾಯಿ ಎಲ್ಲವನ್ನು ವಿವರಿಸಿ ಹೇಳುತ್ತಾಳೆ. ಆಗ ಈರಪ್ಪಯ್ಯ ಕೊಡೇಕಲ್ಲ ಬಸವಣ್ಣನನ್ನು ಹುಡುಕಿಕೊಂಡು ಹೋಗಿ ಅವನ ಶಿಷ್ಯನಾಗುತ್ತಾನೆ.[೧೧] ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಈರಪ್ಪಯ್ಯ ''ಗುಂಡಬಸವಣ್ಣನ ಮಗ'' ಎನ್ನುವುದು. ತಿಳಿದ ಮೇಲೆ ಕೊಡೇಕಲ್ಲ ಬಸವಣ್ಣ ಈರಪ್ಪಯ್ಯನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಳ್ಳಲು ಭಿಕ್ಷೆಯನ್ನು ಬೇಡಲು ಬಂದಿದ್ದಿರಬಹುದು. ಈರಪ್ಪಯ್ಯನು ಅನೇಕ ಪವಾಡಗಳನ್ನು ಮಾಡಿ ಪ್ರಸಿದ್ಧಿಯನ್ನು ಪಡೆದಿದ್ದನು. ಗುಂಡಬಸವಣ್ಣನ ಅಂಕಿತದಲ್ಲಿ (ಸ್ವರವಚನ) ಡಂಗೂರ ಪದಗಳನ್ನು ಸಾರಿದವನು ಬಹುಶಃ ಇವನೇ ಇರಬೇಕು ಎನಿಸುತ್ತದೆ. ಈ ಈರಪ್ಪಯ್ಯನ ಗದ್ದುಗೆಯ ಮೇಲೆ ಗೋಪುರವನ್ನು ಹೊಂದಿದ್ದು ವಿಶಾಲವಾದ ಪ್ರಾಂಗಣವನ್ನು ಹೊಂದಿದೆ. ಈರಪ್ಪಯ್ಯನ ಗದ್ದುಗೆಯ ಮುಂದೆ ಅತಿಥಿಶಾಲೆಯಿದೆ. ಈರಪ್ಪಯ್ಯನ ಗದ್ದಿಗೆಯ ವಿನ್ಯಾಸ ಮುಸ್ಲಿಂ ವಾಸ್ತುಶಿಲ್ಪವನ್ನು ಹೋಲುತ್ತದೆ. ಕೊಡೇಕಲ್ಲ ಮಠದವರಿಂದ ಇಂದಿಗೂ ಈ ಗದ್ದುಗೆಯ ಪೂಜೆ ನಡೆಯುತ್ತದೆ.

### ಗುಂಡಬಸವಣ್ಣ ಮತ್ತು ತಿಪ್ಪಣ್ಣಯ್ಯನ ಜೋಡುಗದ್ದಿಗೆಗಳು

ಈರಪ್ಪಯ್ಯನ ಗದ್ದಿಗೆಯ ಪಕ್ಕದಲ್ಲಿ ಎರಡು ಜೋಡಿ ಗದ್ದಿಗೆಗಳಿವೆ. ಇವು ಗುಂಡಬಸವಣ್ಣ ಮತ್ತು ತಿಪ್ಪಣ್ಣಯ್ಯನ ಗದ್ದಿಗೆಗಳೆಂದು ತಿಳಿದುಬರುತ್ತವೆ. ಗುಂಡಬಸವಣ್ಣ ತಾನು ದೇಹ ಬಿಡುವಂತಹ ಸಂದರ್ಭದಲ್ಲಿ ತಿಪ್ಪಣ್ಣಯ್ಯನ ಗದ್ದಿಗೆಯ ಪಕ್ಕದಲ್ಲಿ ಗುಹೆ ಮಾಡಿ ಎಂದು ಹೇಳುತ್ತಾನೆ. ಅದೇ ರೀತಿ ಅವನ ಶಿಷ್ಯರು ತಿಪ್ಪಣ್ಣಯ್ಯನ ಗದ್ದಿಗೆಯ ಪಕ್ಕದಲ್ಲಿ ಗವಿಯನ್ನು ಮಾಡಿ ಗುಂಡಬಸವಣ್ಣ ಐಕ್ಯವಾದ ಮೇಲೆ ತಿಪ್ಪಣ್ಣಯ್ಯ ಮತ್ತು ಗುಂಡಬಸವಣ್ಣರ ಗದ್ದಿಗೆಯ ಮೇಲೆ ಮೆಟ್ಟಿಲು ಮಾದರಿಯಲ್ಲಿ ಗೋಪುರವನ್ನು ನಿರ್ಮಾಣ ಮಾಡಿರುವಂತೆ ಕಂಡಬರುತ್ತದೆ. ಈ ಜೋಡು ಗದ್ದಿಗೆಯ ಮುಂದು ಗಡೆ ಕಂಬಗಳಿಂದ ನಿರ್ಮಿಸಿದ ವಿಶಾಲವಾದ ಪ್ರಾಂಗಣವಿದೆ. ಹಿಂದೆ ಕಲ್ಲಿನಿಂದ ನಿರ್ಮಿಸಿರು ಬಾವಿ ಇದೆ. ಈ ಗದ್ದಿಗೆಗಳಿಗೆ ಕೊಡೇಕಲ್ಲ ಮಠದವರು, ಗುಂಡಬಸವಣ್ಣ ವಂಶಜರು ಪೂಜೆಯನ್ನು ಮಾಡುತ್ತಾರೆ. ಜನವಸತಿ ಇಲ್ಲದ ಕಾರಣ ಗೊತ್ತಿದ್ದವರು ಮಾತ್ರ ಈ ಗದ್ದಿಗೆಯ ಹತ್ತಿರ ಹೋಗುತ್ತಾರೆ.

### ಆಂಜನೇಯ ದೇವಾಲಯ

ಹದಿನೇಳನೆಯ ಶತಮಾನದಲ್ಲಿ ನಿರ್ಮಾಣಗೊಂಡಿದೆ ಎನ್ನಲಾಗುವ ಈ ದೇವಾಲಯವು ಈರಪ್ಪಯ್ಯನ ಗದ್ದಿಗೆಯ ಹಿಂಭಾಗದಲ್ಲಿ ವಿಶಾಲವಾದ ಬಯಲಿನಲ್ಲಿ ನಿರ್ಮಾಣಗೊಂಡಿದೆ. ದಕ್ಷಿಣಾಭಿಮುಖವಾಗಿರುವ ದೇವಾಲಯವು ಗರ್ಭಗೃಹ, ಪ್ರದಕ್ಷಿಣ ಪಥ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿರುವ ಸುಮಾರು ನಾಲ್ಕು ಅಡಿ ಎತ್ತರದ ಆಂಜನೇಯ ಮೂರ್ತಿಯು ಓರೆಮುಖ ಹೊಂದಿರದೆ ಎದುರು ಮುಖ ಹೊಂದಿರುವುದು ವಿಶೇಷವಾಗಿದೆ. ಈ ದೇವಾಲಯವು ಎತ್ತರವಾದ ಅಧಿಷ್ಠಾನವನ್ನು ಹೊಂದಿದೆ. ಹೊರಗೋಡೆಯಲ್ಲಿ ಹೂಬಳ್ಳಿಗಳೊಂದಿಗೆ ಮಿಥುನ ಶಿಲ್ಪಗಳ ಶಿಲಾ ಪಟ್ಟಿಗಳನ್ನು ನೋಡಬಹುದು. ಈ ದೇವಾಲಯದ ಎದುರುಗಡೆ ದೀಪಸ್ತಂಭವಿದೆ. ಈ ದೇವಾಲಯದಲ್ಲಿ ಪ್ರತಿನಿತ್ಯ ಪೂಜೆ ನಡೆಯುತ್ತಿದ್ದು ಅಪಾರವಾದ ಭಕ್ತ ಸಮೂಹವನ್ನು ಒಳಗೊಂಡಿದೆ.

### ಮಧುಸೂದನಾಲಯ

ಕ್ರಿ.ಶ. ೧೦೫೮ರ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಅಂದು ಘಟಿಕಾಲಯವನ್ನು ಒಳಗೊಂಡ ದೇವಾಲಯಗಳಲ್ಲಿ ಇದು ಒಂದು. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ ನವರಂಗ ಹಾಗೂ ಸಭಾಮಂಟಪಗಳನ್ನು ಹೊಂದಿದ್ದು ಈಗ ಗರ್ಭಗುಡಿಯು ಬಿದ್ದು ಹೋಗಿದೆ. ಇದರ ಬಾಗಿಲು ಆಕರ್ಷಕವಾಗಿದ್ದು ನಾಲ್ಕು ಆಲಂಕಾರಿಕ ಪಟ್ಟಿಯನ್ನು ಒಳಗೊಂಡಿದ್ದು, ಎಡಭಾಗದಲ್ಲಿ ಲಕ್ಷ್ಮಿನರಸಿಂಹನ ಶಿಲ್ಪವನ್ನು ಕೆತ್ತಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮಿ ಚಿಹ್ನೆಯಿದೆ. ನವರಂಗದಲ್ಲಿ ನಾಗಯಕ್ಷಿಣಿಯ ಶಿಲ್ಪವು ನೋಡಲು ಸುಂದರವಾಗಿದೆ. ಸಭಾಮಂಟಪದಲ್ಲಿ ಎರಡು ಭಾರಿ ಗಾತ್ರದ ಶಿಲಾಶಾಸನಗಳು ಉರುಳಿಬಿದ್ದಿವೆ.

### ಜೈನ ಬಸದಿ

ಮಧುಸೂದನಾಲಯದ ಪೂರ್ವಕ್ಕೆ ಸ್ವಲ್ಪ ದೂರದಲ್ಲಿರುವ ಕಟ್ಟಡವೇ ಪುರಾತನವಾದ ಜೈನ ಬಸದಿಯಾಗಿದೆ. ಈಗ ಈ ಬಸದಿಯು ಪಾಳುಬಿದ್ದಿದ್ದು, ಗರ್ಭಗುಡಿ ಹಾಗೂ ಅಂತರಾಳಗಷ್ಟೇ ಉಳಿದಿದ್ದು ನವರಂಗ ಭಾಗ

ಬಿದ್ದುಹೋಗಿದೆ. ಗರ್ಭಗೃಹದಲ್ಲಿ ಜೈನ ತೀರ್ಥಂಕರ ಶಿಲ್ಪವಿದ್ದು ಸುಮಾರು ನಾಲ್ಕು ಅಡಿ ಎತ್ತರವಿದೆ. ಬಸದಿಯ ಒಳಗೆ ತೀರ್ಥಂಕರರ ಪ್ರತಿಮೆಗಳೊಂದಿಗೆ ಅನೇಕ ಶಿಲ್ಪರಚನೆಗಳನ್ನು ಕಾಣಬಹುದು.

**ಕರಿ ಮಸೀದಿ**

ಮೂಲತಃ ಶೈವ ದೇವಾಲಯವಾಗಿದ್ದು ಮಹಮ್ಮದೀಯರ ಆಳ್ವಿಕೆಯ ಕಾಲದಲ್ಲಿ ಮುಸ್ಲಿಂ ಪ್ರಾರ್ಥನಾ ಮಂದಿರವಾಗಿ ರೂಪಾಂತರಗೊಂಡಿದೆ. ಈ ಕಟ್ಟಡದಲ್ಲಿನ ಕಂಬಗಳು ಕಪ್ಪುಶಿಲೆಯಲ್ಲಿದ್ದು, ಇವುಗಳನ್ನು ವಿವಿಧ ವಿನ್ಯಾಸಗಳಲ್ಲಿ ನುಣುಪಾಗಿ ಕೆತ್ತಲಾಗಿದೆ. ಇದಕ್ಕೆ ಹೊಂದಿಕೊಂಡಂತೆ ಒಂದು ತಿಳಿನೀರಿನ ಬಾವಿಯಿದೆ. ಈ ದೇವಾಲಯದ ಮಹಾದ್ವಾರವು ಉತ್ತರಾಭಿಮುಖವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿ ಸಂಕೇತವಿದೆ.

ಹೀಗೆ ನಾಗಾವಿಯ ಪರಿಸರದಲ್ಲಿ ಇನ್ನೂ ಅನೇಕ ದೇವಾಲಯಗಳು ಪಾಳುಬಿದ್ದು ನಶಿಸಿಹೋಗಿವೆ. ಪುರಾತತ್ವ ಇಲಾಖೆಯವರು ಉತ್ಖನನ ಮಾಡುವ ಮತ್ತು ಇರುವಂಥ ದೇವಾಲಯಗಳನ್ನು ದುರಸ್ತಿ ಮಾಡುವುದು ಅವಶ್ಯವಾಗಿದೆ. ಇಲ್ಲಿಯ ದೇವಾಲಯಗಳನ್ನು ನೋಡಿದರೆ ಮತ್ತು ಘಟಿಕಾಲಯವಾಗಿರುವ ಕುರಿತಂತೆ ಸಿಕ್ಕಿರುವ ಶಾಸನಗಳನ್ನು ನೋಡಿದರೆ ಬಹುಶಃ ಇಲ್ಲಿ ರಾಜರ ವಸತಿನಿಲಯವಿದ್ದು ನಶಿಸಿ ಹೋಗಿರುವ ಸಾಧ್ಯತೆಗಳಿವೆ.

ಒಟ್ಟಿನಲ್ಲಿ ನಾಗಾವಿಯ (ಧರ್ಮಕಲ್ಯಾಣದ) ಸ್ಥಳನಾಮ ಅಧ್ಯಯನ ಭೌಗೋಳಿಕ, ಶೈಕ್ಷಣಿಕ, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಿಂದ ಅಧ್ಯಯನ ಯೋಗ್ಯವಾಗಿದೆ.

**ಟಿಪ್ಪಣಿಗಳು**

೧. ಡಿಗ್ಗಿಸಂಮನಾಥ ಒಂದು ಅಧ್ಯಯನ (ಅಪ್ರಕಟಿತ ಎಂ.ಫಿಲ್ ನಿಬಂಧ), ಅನುಪಮಾ ಆದಾಪುರ, ಪುಟ.೮

೨. ಗುಲಬರ್ಗಾ ಜಿಲ್ಲಾ ಶಾಸನಗಳು (ಸಂ), ಮೀನಾಕ್ಷಿ ಗೋಗಿ, ಪು. ೧೯೬, ೨೦೧, ೨೦೩.

೩. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ, ಎಚ್.ಎಸ್. ಮೇಲಿನಮನಿ, ಪು. ೨೧೫

೪ ಲೇಖಾವರಣ, ಮಲ್ಲಿಕಾರ್ಜುನ ಬಾಗೋಡಿ ಪು. ೨

೫. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಪುಸ್ತಕ ಪ್ರಾಧಿಕಾರ, ಪು. ೬೪೩

೬. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ ಮತ್ತು ಎಚ್.ಎಸ್. ಮೇಲಿನಮನಿ, ಪು.೨೧೫

೭. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ ಮತ್ತು ಎಚ್.ಎಸ್. ಮೇಲಿನಮನಿ, ಪು.೨೧೫

೮. ಲೇಖಾವರಣ, ಮಲ್ಲಿಕಾರ್ಜುನ ಬಾಗೋಡಿ, ಪು. ೧

೯. ಲೇಖಾವರಣ, ಮಲ್ಲಿಕಾರ್ಜುನ ಬಾಗೋಡಿ, ಪು. ೪

* ಯೋಜನೆ - ನಾಲ್ಕು ಹರಿದಾರಿ, ಸುಮಾರು ೧೨ ಮೈಲು.
ಗಾವುದ - ಎರಡು ಹರಿದಾರಿ, ಸುಮಾರು ೬ ಮೈಲು.

೧೦. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯ ಸ್ವಾಮಿ, ಪ್ರಸ್ತಾವನೆ, ಪುಟ xxv

೧೧ ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯ ಸ್ವಾಮಿ, ಪ್ರಸ್ತಾವನೆ, ಪುಟ xxvi

೧೨ ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯ ಸ್ವಾಮಿ, ಪ್ರಸ್ತಾವನೆ, ಪುಟ ೩೫

೧೩. ಲೇಖಾವರಣ, ಮಲ್ಲಿಕಾರ್ಜುನ ಬಾಗೋಡಿ, ಪು. ೧

೧೪. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ, ಎಚ್.ಎಸ್. ಮೇಲಿನಮನಿ, ಪು. ೨೧೫

೧೫ ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ, ಎಚ್.ಎಸ್. ಮೇಲಿನಮನಿ, ಪು. ೨೧೫

೧೬. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ, ಎಚ್.ಎಸ್. ಮೇಲಿನಮನಿ, ಪು. ೨೧೫

೧೭. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ, ಎಚ್.ಎಸ್. ಮೇಲಿನಮನಿ, ಪು. ೨೧೬

೧೮. ಡಾ. ವಿ. ಶಿವಾನಂದ, ಕಲಬುರ್ಗಿ ಜಿಲ್ಲಾ ಶಾಸನಗಳು, ಪುಟ ೪೨

೧೯. ಸಂಶೋಧನಾ ಲೇಖನಗಳು (ಸಂ), ಡಾ. ವ್ಹಿ.ಜಿ. ಪೂಜಾರ, ಪುಟ.೫೩

೨೦. ಸಂಶೋಧನಾ ಲೇಖನಗಳು (ಸಂ), ಡಾ. ವ್ಹಿ.ಜಿ. ಪೂಜಾರ, ಪುಟ.೫೩

೨೧. ಗುಲಬರ್ಗಾ ಜಿಲ್ಲಾ ಶಾಸನಗಳು (ಸಂ) ಮೀನಾಕ್ಷಿ ಗೋಗಿ, ಪುಟ ೨೦೩

೨೨ ಸಂಶೋಧನಾ ಲೇಖನಗಳು (ಸಂ), ವ್ಹಿ.ಜಿ. ಪೂಜಾರ, ಪುಟ ೫೩

೨೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ xxvii

೨೪. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ xxvii

೨೫. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ xxviii

೨೬. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ xxix

೨೭. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ xxix

೨೮. ಸಂಶೋಧನಾ ಲೇಖನಗಳು (ಸಂ), ವ್ಹಿ.ಜಿ. ಪೂಜಾರ, ಪುಟ.೫೫

೨೯. ಸಂಶೋಧನಾ ಲೇಖನಗಳು (ಸಂ), ವ್ಹಿ.ಜಿ. ಪೂಜಾರ, ಪುಟ.೫೫

೩೦. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ ಮತ್ತು ಎಚ್.ಎಸ್. ಮೇಲಿನಮನಿ, ಪು. ೨೧೪

೩೧. ಕನ್ನಡ ಶಾಸನಗಳ ಅಧ್ಯಯನ (ಸಂ), ಎಸ್.ಎಸ್. ಭಗವತಿ ಮತ್ತು ಎಚ್.ಎಸ್. ಮೇಲಿನಮನಿ, ಪು. ೨೨೪

೩೨. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ ಪುಟ xxiv

* * *

ಅಧ್ಯಾಯ ಮೂರು

# ಕಾವ್ಯಗಳಲ್ಲಿ ಧರ್ಮಕಲ್ಯಾಣ ಉಲ್ಲೇಖ

೩.೧ ಗುಂಡಬಸವೇಶ್ವರ ಚರಿತ್ರೆ

೩.೨ ನಂದಿಯಾಗಮಲೀಲೆ

೩.೩ ಸ್ವರವಚನ ಸಾಹಿತ್ಯ

೩.೪ ಡಂಗುರ ಪದಗಳು

# ಕಾವ್ಯಗಳಲ್ಲಿ ಧರ್ಮಕಲ್ಯಾಣ ಉಲ್ಲೇಖ

## ೩.೧. ಗುಂಡಬಸವೇಶ್ವರ ಚರಿತ್ರೆ

''ಧರ್ಮಕಲ್ಯಾಣದ'' ಸ್ಥಾಪಕನೆಂದು ಹೇಳಲಾಗುವ ಗುಂಡಬಸವಣ್ಣನನ್ನು ಕುರಿತಾದ ಕೃತಿಯೇ ಈ ಗುಂಡಬಸವೇಶ್ವರ ಚರಿತ್ರೆಯಾಗಿದೆ. ಈ ಕೃತಿಯು ಗುಂಡಬಸವಣ್ಣನ ಶಿಷ್ಯನೊಬ್ಬನಿಂದ ರಚಿತವಾಗಿರುವ ಸಾಧ್ಯತೆ ಇದೆಯೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೧] ಈ ಕೃತಿಯನ್ನು ಕಾಗದದ ಹಸ್ತಪ್ರತಿಯಿಂದ ಪರಿಷ್ಕರಿಸಿ ಸಂಪಾದಿಸಿದವರು ವಿದ್ವಾಂಸರಾದ ಎಂ.ಎಂ. ಕಲಬುರ್ಗಿಯವರು ಮತ್ತು ಸಂಗಪ್ಪಯ್ಯ ಸ್ವಾಮಿಯವರು. ಗುಂಡಬಸವೇಶ್ವರ ಚರಿತ್ರೆ ಕೃತಿಯ ಹಸ್ತಪ್ರತಿಯ ಆದಿಯಲ್ಲಿ ಶ್ರೀ ಗುರುವೆಗತಿ| ರಾಘುಸಾಳುಗ ಪಲ್ಲವ|| ಎಂತಲೂ ಅಂತ್ಯದಲ್ಲಿ ''ಶ್ರೀ ಮತು ಶಾಲಿವಾಹನಶಕೆ ೧೬೨೨ನೇ ವಿಕ್ರಮನಾಮ ಸಂವತ್ಸರದೊಳಗೆ ಆಶ್ವೀಜ ಅಧಿಕಮಾಸದೊಳು ಸಪ್ತಮಿ ಮಂಗಳವಾರ ದಿನ ಮುಗಿಯಿತು ಎಂದು ಇರುವದರಿಂದ'' ಇದರ ಕಾಲವನ್ನು ಕ್ರಿ.ಶ. ೧೭೦೦ ಎಂದು ಗುರುತಿಸಬಹುದು. ಕ್ರಿ.ಶ. ೧೭೦೦ರಲ್ಲಿ ಕೃತಿ ಲಿಪಿಕರಣವಾದರೆ ಅದಕ್ಕೂ ಮುಂಚೆಯೇ ಕೃತಿ ರಚನೆಯಾಗಿದೆ ಎಂದು ಸ್ಪಷ್ಟವಾಗಿ ತಿಳಿಯಬಹುದು. ಈ ಕೃತಿಯನ್ನು ಸಂಪಾದನೆ ಮಾಡಿದ ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯ ಪಡುವಂತೆ ''ಇದರ ಕರ್ತೃವಿನ ಹೆಸರು ತಿಳಿದುಬಂದಿಲ್ಲ. ಕೃತಿ ರಚನಾ ಕಾಲವೂ ಗೊತ್ತಾಗಿಲ್ಲ. ಹಸ್ತಪ್ರತಿ ಲಿಪಿಕರಣ ಕಾಲ ೧೬೨೨ (ವಿಕ್ರಮನಾಮ ಸಂವತ್ಸರ) ಅಂದರೆ ಕ್ರಿ.ಶ. ೧೭೦೦. ಹೀಗಾಗಿ ಈ ಕೃತಿಯು ಇದಕ್ಕೆ ಮೊದಲೇ ಹುಟ್ಟಿರಬಹುದು ಎಂದು ಮಾತ್ರ ಹೇಳಬಹುದು. ಕವಿಯು ಒಮ್ಮೆ ಮಾತ್ರ ಗುಂಡಬಸವೇಶ್ವರ ಚರಿತ್ರೆ ಎಂದು ಕರೆದಿರುವುದರಿಂದ ಅದನ್ನೆ ಕೃತಿನಾಮವೆಂದು ಇಟ್ಟುಕೊಳ್ಳಲಾಗಿದೆ''[೨] ಎಂದಿದ್ದಾರೆ.

ಈ ಕೃತಿಯು ''ಧರ್ಮಕಲ್ಯಾಣ''ವನ್ನು ಸ್ಥಾಪಿಸಿದ ಗುಂಡಬಸವಣ್ಣನ ಚರಿತ್ರೆಯಾಗಿದ್ದು, ಗುಂಡಬಸವಣ್ಣನ ಬಾಲ್ಯ, ಮದುವೆ, ಬೋಧನೆ, ಪವಾಡಗಳು, ಧರ್ಮಕಲ್ಯಾಣ ಸ್ಥಾಪನೆ ಕುರಿತಂತೆ ಅನೇಕ ಸಮಕಾಲೀನ ವಿಷಯವನ್ನು ಒಳಗೊಂಡಿದೆ. ಈ ಕೃತಿಯು ಒಟ್ಟು ಏಳು ಸಂಧಿಯನ್ನು ಒಳಗೊಂಡಿದ್ದು ಮೊದಲನೆಯ ಸಂಧಿಯಲ್ಲಿ ಶರಣರ ಸ್ತುತಿಯನ್ನು ನೋಡುತ್ತೇವೆ. ಎರಡನೆಯ ಸಂಧಿಯಲ್ಲಿ ಗುಂಡಬಸವೇಶ್ವರನ ಶಿವಸನ್ನಿಧಿ ಕಥನ, ಮೂರನೆಯ ಸಂಧಿಯಲ್ಲಿ ಗುಂಡ ಬಸವೇಶ್ವರನ ಗ್ರಾಮ ಕಥನ, ನಾಲ್ಕರಲ್ಲಿ ಗುಂಡಬಸವೇಶ್ವರನ ಅವತಾರಗಳು, ಐದರಲ್ಲಿ ಗುಂಡಬಸವೇಶ್ವರನ ಸಂಸಾರ ಕಥನ, ಆರರಲ್ಲಿ ಅವನ ಲೀಲೆಗಳು ಮತ್ತು ಕೊನೆಯ ಏಳನೆಯ ಸಂಧಿಯಲ್ಲಿ ಗುಂಡಬಸವಣ್ಣನ ಐಕ್ಯ ಕಥನವನ್ನು ಕಾಣುತ್ತೇವೆ. ಈ ಕೃತಿಯ ಮೊದಲ ಐದು ಸಂಧಿಯಲ್ಲಿ ಗುಂಡಬಸವಣ್ಣ

ಲೌಕಿಕ ಜೀವನಕ್ಕೆ ಅಂಟಿಕೊಂಡಿದ್ದಂತೆ ಕಾಣುತ್ತದೆ. ಆದರೆ ಕೊನೆಯ ಆರು ಮತ್ತು ಏಳನೆಯ ಸಂಧಿಯಲ್ಲಿ ಉಲ್ಲೇಖಿಸಿರುವಂತೆ ಅವನ ಅಲೌಕಿಕ ಜೀವನ ಊರ ಹೊರಗೆ ಮಠ ಕಟ್ಟಲು ಪಟ್ಟ ಶ್ರಮ ಇವೆಲ್ಲವುಗಳ ಚಿತ್ರಣ ಇದೆ.

ಗುಂಡಬಸವಣ್ಣನು ಜನರನ್ನು ಉದ್ಧರಿಸಲೆಂದು ಅನೇಕ ರೀತಿಯಲ್ಲಿ ಪ್ರಯತ್ನಪಡುತ್ತಾನೆ. ಕೊನೆಗೆ ನಾಗಾವಿಯ ಊರ ಹೊರಗೆ ಮಠವನ್ನು ಕಟ್ಟಿ ಅದಕ್ಕೆ ಧರ್ಮಕಲ್ಯಾಣ ಎಂದು ಹೆಸರು ಇಡುತ್ತಾನೆ. ಅದರ ಉಲ್ಲೇಖ ಕೆಳಗಿನಂತಿದೆ.

''ಕಟ್ಟಿದನು ಊರ ಹೊರಗೆ ಮಠವನು ತಾನು
ಇಟ್ಟನು ಅದಕೆ ನಾಮವನು
ಸೃಷ್ಟಿಗೆ ಧರ್ಮಕಲ್ಯಾಣವೆಂದಾಗಿಸಿದ
ನಿಷ್ಠೆಯ ಮೂಲ ಪೀಠವನು.''[೧]

ಇಡೀ ಕಾವ್ಯದಲ್ಲಿ ಈ ಪದ್ಯವು ಮುಖ್ಯವೆನಿಸುತ್ತದೆ. ''ಧರ್ಮಕಲ್ಯಾಣ''ವೆಂದರೆ ಯಾವುದು ಎನ್ನುವಂತದ್ದು ಇದರಿಂದ ಗೊತ್ತಾಗುತ್ತದೆ. ಗುಂಡಬಸವಣ್ಣನ ಪ್ರಕಾರ ಸೃಷ್ಟಿಗೆ ಇದು ನಿಷ್ಠೆಯ ಮೂಲ ಪೀಠ ಎನ್ನುವಂತ ಅಭಿಪ್ರಾಯ ಬರುತ್ತದೆ.

ಗುಂಡ ಬಸವಣ್ಣ ಧರ್ಮಕಲ್ಯಾಣವನ್ನು ಸ್ಥಾಪಿಸಿದ ಮೇಲೆ ಅವನಿಗೆ ''ಧರ್ಮಕಲ್ಯಾಣ ದೊಡೆಯ'' ಎನ್ನುವಂತ ನಾಮಾವಳಿಯು ಬಂದಂತೆ ತೋರುತ್ತದೆ.

''ಧರ್ಮಕಲ್ಯಾಣ ದೊಡೆಯಗೆ
ನಿರ್ಮಳ ಭಕ್ತಿಯಲಿ ನಡೆದು ಗುರವೆಂದರಿತರೆ
ಪರ್ಮಪದವೀವ ಇಹದಲಿ
ಪರ್ಮ ಗುರುಗುಂಡನೀವ ಪರಮ ಸಾಯುಜ್ಯವ''[೨]

ಗುರು ಗುಂಡಬಸವೇಶ ಧರ್ಮಕಲ್ಯಾಣದ ಒಡೆಯನಾಗಿದ್ದು, ನಿರ್ಮಲವಾಗಿರುವಂಥ ಭಕ್ತಿಯಿಂದ ನಡೆದುಕೊಂಡರೆ, ಪರಮ ಪದವಿಯ ನೀಡುವನು ಇಹದಲ್ಲಿ ಎನ್ನುವ ಸಂಗತಿಯನ್ನು ನೋಡಿದರೆ ಗುಂಡಬಸವಣ್ಣನಿಗೆ ಅಪಾರವಾದ ಗುರುಮನ್ನಣೆ ಇತ್ತೆಂದು ತಿಳಿದುಬರುತ್ತದೆ.

ಮುಂದೆ ಗುಂಡಬಸವಣ್ಣನು ಐಕ್ಯವಾಗುವ ಸಂದರ್ಭದಲ್ಲಿ ಧರ್ಮಕಲ್ಯಾಣವನ್ನು ಕುರಿತಂತೆ ತನ್ನ ಭಕ್ತರಿಗೆ ಈ ರೀತಿಯ ಮಾತುಗಳನ್ನು ನುಡಿಯುತ್ತಾನೆ.

''ಸರ್ವತಃ ಧರ್ಮಕಲ್ಯಾಣವೆಲ್ಲಾದೆಂದು
ಅರಸಿಕೊಳುತಲಿ ಬಂದಾರು
ಬಾರದಿರ್ದರೆ ನೀವು ಸ್ಥಿತಿಸನ್ಯವಿರಲಿಕೆ
ಮೀರಿ ಹೋಗಲಿಬೇಡವೆಂದ''[೩]

ಮುಂದೊಂದು ದಿನ ಧರ್ಮಕಲ್ಯಾಣ ಎಲ್ಲಿದೆ ಎಂದು ಭಕ್ತರು ಬಂದಾರು ಎಂದು ನುಡಿಯುತ್ತಾನೆ. ಧರ್ಮಕಲ್ಯಾಣ ಎನ್ನುವಂತದ್ದು ಜನರ ಆತ್ಮದ ಉನ್ನತಿಗಾಗಿ ಇರುವಂತದ್ದು. ತಿಳಿಯಲು ಬರುವಂತವರಿಗೆ

ಇಲ್ಲಿ ಯಾವ ತೊಂದರೆಯೂ ಇಲ್ಲ. ನೀವು ನಿಮ್ಮ ಭಕ್ತಿಗೆ ಅನುಗುಣವಾಗಿ ನಡೆಯಿರಿ ಎನ್ನುವ ವಿಚಾರವನ್ನು ಭಕ್ತರಿಗೆ ಗುಂಡಬಸವಣ್ಣ ತಿಳಿಸುತ್ತಾನೆ.

ಧರ್ಮಕಲ್ಯಾಣದ ಉಲ್ಲೇಖವನ್ನು ಒಳಗೊಂಡಿರುವಂಥ ಕೃತಿಗಳಲ್ಲಿ ಗುಂಡಬಸವೇಶ್ವರ ಚರಿತ್ರೆಯು ಪ್ರಮುಖವಾಗಿದೆ. ಧರ್ಮಕಲ್ಯಾಣ ಸ್ಥಾಪಿಸಿ ಅಲ್ಲಿ ಜನರು ಭಕ್ತಿಯಿಂದ ಗುಂಡಬಸವಣ್ಣನು ಪೂಜಿಸಿ ಕೃತಾರ್ಥರಾದರು ಎಂಬುದನ್ನು ಕೃತಿಯ ಅಂತ್ಯದಲ್ಲಿ ಕಾಣುತ್ತೇವೆ. ಕಲಿಯುಗದ ಕರ್ಮವನ್ನು ಕಳೆಯುವಂಥ ವಜ್ರದ ಗುಂಡು ಈ ಗುಂಡಬಸವೇಶ್ವರ ಎಂದು ಹೇಳಲಾಗಿದೆ. ಕೊನೆಯ ಪದ್ಯದಲ್ಲಿ ಗುಂಡಬಸವೇಶ್ವರ ಚರಿತ್ರೆಯು ಮುಗಿಯಿತು ಎಂದು ಈ ರೀತಿ ಉಲ್ಲೇಖಿಸಲಾಗಿದೆ.

''ತುಂಬಿಡೇಳನೆ ಸಂಧಿ ಅಂತು ಏಳನೂರ
ತೊಂಬತ್ತ ಮೂರು ಪದನಾಗಿ
ಶಂಭುಭಕ್ತನು ಗುಂಡಬಸವೇಶ್ವರನ ಚರಿ
ತ್ರೆಂಬುದಿಲ್ಲಿಗೆ ಸಂಪೂರ್ಣ''[೪]

ಏಳನೇ ಸಂಧಿ ಏಳೂನಾರಾ ತೊಂಬತ್ತ ಮೂರು ಪದಕ್ಕೆ ''ಗುಂಡಬಸವೇಶ್ವರ ಚರಿತ್ರೆ'' ಎಂಬುದು ಮುಕ್ತಾಯ ಎಂದು ಹೇಳಲಾಗಿದೆ. ಕಾರಣ ಕೃತಿನಾಮ ''ಗುಂಡಬಸವೇಶ್ವರ ಚರಿತ್ರೆ'' ಎಂದಾಗಿದೆ.

### ೩.೨. ನಂದಿಯಾಗಮ ಲೀಲೆ

ವಿಜಯನಗರದ ಕಾಲದ ವೀರಶೈವ ಸಾಹಿತ್ಯದ ಸಂಕಲನ, ಸಂಪಾದನೆ ಹಾಗೂ ಪರಿಷ್ಕರಣ ಚಟುವಟಿಕೆಗಳು ತುಂಬಾ ಮಹತ್ವದ ಸಂಗತಿಗಳಾಗಿವೆ. ಈ ಪರಂಪರೆಯ ಆಶಯಕ್ಕೆ ಭಿನ್ನವಾಗಿ ಕಾಣಿಸಿಕೊಳ್ಳುವ ಹಾಗೂ ಇದೇ ನೆಲೆಯಿಂದ ಸಿಡಿದು ಹೋಗಿರುವ ಕೊಡೇಕಲ್ಲ ಕಾಲಜ್ಞಾನ ಪರಂಪರೆಯು ತನ್ನದೇ ಆದ ಹಲವು ನೆಲೆಗಳಲ್ಲಿ ತನ್ನ ಅಸ್ತಿತ್ವವನ್ನು ಹುಟ್ಟುಹಾಕಿದೆ. ಹಂಪಿಯಲ್ಲಿ ಹುಟ್ಟಿದ ಕೊಡೇಕಲ್ಲ ಬಸವಣ್ಣ ತನ್ನ ಗುರು ಸಂಗಮನಾಥನೊಂದಿಗೆ ಸೇರಿಕೊಂಡು ಕಲ್ಯಾಣ ಪರಂಪರೆಯನ್ನು ಮುಂದುವರಿಸಿದ್ದನ್ನು ನಂದಿಯಾಗಮಲೀಲೆ ಸ್ಪಷ್ಟಪಡಿಸುತ್ತದೆ.[೫]

ಕೊಡೇಕಲ್ಲ ಪರಂಪರೆಗೆ ಬಸವಣ್ಣನೇ ನಾಯಕನಾದರೂ ಆತನಿಗೆ ಮಾರ್ಗದರ್ಶಿಯಾಗಿ, ಗುರುಗಳಾಗಿ ದಿಗ್ಗಿಯ (ಶಹಪುರ ತಾ) ಸಂಗಮನಾಥ ಹೆಬ್ಬಾಳದ (ಸುರಪುರ ತಾ) ಪರಮಾನಂದ ಪ್ರಭುಗಳು ಇದ್ದಾರೆ. ಪರಂಪರೆಯನ್ನು ಕಟ್ಟುವಲ್ಲಿ ಮುಖ್ಯರಾದ ಮಂಟೇಸ್ವಾಮಿ, ರಾಚಪ್ಪಾಜಿ, ಗುಹೇಶ್ವರ ಸಂಗಮನಾಥರೂ ಇದ್ದಾರೆ. ''ನಂದಿಯಾಗಮ ಲೀಲೆಯು'' ಪರಂಪರೆಯನ್ನು ಕುರಿತು ಚಾರಿತ್ರಿಕವಾದ ಸಂಗತಿಗಳನ್ನು ವಿಶದವಾಗಿ ತನ್ನದೇ ಆದ ಕ್ರಮದಲ್ಲಿ ನಿರೂಪಿಸುತ್ತದೆ. ಜೊತೆಗೆ ೧೫, ೧೬ನೇ ಶತಮಾನದ ಶೈವ, ವೀರಶೈವ, ಆರೂಢ, ಸೂಫಿ, ನಾಥ ಮೊದಲಾದ ಸಂಸ್ಕೃತಿಗಳ ಆಂತರಿಕ ಸಂಬಂಧಗಳ ಸ್ವರೂಪವನ್ನು ತಿಳಿಯುವಲ್ಲಿ ಮಹತ್ವದ ಆಕರಗಳಾಗಿ ನಿಲ್ಲುತ್ತವೆ.

ಕೊಡೇಕಲ್ಲ ಬಸವಣ್ಣನನ್ನು ತಿಳಿಸುವ ನಂದಿಯಾಗಮಲೀಲೆಯು ಕೊಡೇಕಲ್ಲ ಬಸವಣ್ಣನ ಸಮಕಾಲೀನ ಶರಣರನ್ನು ತಿಳಿಸುತ್ತದೆ. ಧರ್ಮಕಲ್ಯಾಣದ ಸ್ಥಾಪಕನೆಂದು ಹೇಳುವ ಗುಂಡಬಸವಣ್ಣನನ್ನು ಕುರಿತಂತೆ ನಂದಿಯಾಗಮಲೀಲೆಯಲ್ಲಿ ಉಲ್ಲೇಖವಿದೆ. ನಾಗಾವಿಯಲ್ಲಿ ಗುಂಡಬಸಪ್ಪನಿದ್ದ ಎನ್ನುವುದಕ್ಕೆ ಈ ಅಂಶವು

ಸಾಕ್ಷಿಯಾಗಿ ನಿಲ್ಲುತ್ತದೆ. ಕೊಡೇಕಲ್ಲ ಬಸವಣ್ಣನು ದೇಶಪರ್ಯಟನೆ ಮಾಡುತ್ತ ಅಮರಕಲ್ಯಾಣದ ಪರ್ಯಾಯ ನಾಮವಾದ ಹಳೆಯ ಸಗರಕ್ಕೆ (ದಿಗ್ಗಿ) ಬರುತ್ತಾನೆ. ಆ ಹೊತ್ತಿಗಾಗಲೆ ಸಂಗಮನಾಥನು ಲಿಂಗೈಕ್ಯನಾಗಿರುತ್ತಾನೆ. ಅವನ ಗದ್ದಿಗೆಯ ದರ್ಶನವನ್ನು ಪಡೆದು ಕೊಡೇಕಲ್ಲ ಬಸವಣ್ಣ ಈಶಾನ್ಯಕ್ಕೆ ನಡೆದು ನಾಗಾವಿಗೆ ಬರುತ್ತಾನೆ. ಅಲ್ಲಿ ಗುಂಡಬಸಪ್ಪನ ಮನೆಗೆ ಬರುತ್ತಾನೆ.[೭]

''ನಾಗಾವಿಯವೆಂಬ ಗ್ರಾಮಕೆ
ಬ್ಯಾಗ ಬಂದು ನಂದಿ ಕೊಳನಲ್ಲಿ
ಜಾಗ ಲಿಸ್ತರ ನೋಡಿ ಇಳಿದು ಮೂರ್ತ ಮಾಡಿದನು
ಸಾಗಿ ಗುಂಡಬಸಪ್ಪನಲ್ಲಿಗೆ
ಆಗ ಭಿಕ್ಷಾ ಶಬ್ದ ಎನಲು
ಈಗೆ ಮಾಡಿ ಇಲ್ಲವೆಂದರೆ ಇಹುದು ಎಂದೆನುತಾ''[೮]

ಕೊಡೇಕಲ್ಲ ಬಸವಣ್ಣ ನಾಗಾವಿಗೆ ಬಂದು ನಂದಿಕೊಳದಲ್ಲಿ ಮಿಂದು ಗುಂಡಬಸಪ್ಪನ ಮನೆಗೆ ಹೋಗುತ್ತಾನೆ. ಗುಂಡಬಸಪ್ಪನ ಹೆಂಡತಿಗೆ ಭಿಕ್ಷೆ ನೀಡು ಎಂದು ಬೇಡಿಕೊಳ್ಳುತ್ತಾನೆ. ನೀಡಲು ಸಿದ್ಧ ಅಡಿಗೆ ಉಳಿದಿಲ್ಲವೆಂದು ಅವಳು ಉತ್ತರ ಕೊಡುತ್ತಾಳೆ. ಇದಕ್ಕೆ ಉತ್ತರವೆನ್ನುವಂತೆ ಕೊಡೇಕಲ್ಲ ಬಸವಣ್ಣನು ಈ ರೀತಿ ಉತ್ತರವನ್ನು ನೀಡುತ್ತಾನೆ.

''ನಡುವೆ ಬಾಜನದೊಟ್ಟಿಯಲ್ಲಿ
ಮಡಗಿದೆ ಬಹುದಿನದ ಕಜ್ಜಾಯ
ಒಡನೆ ನೀಡಲು ಹಸಿವು ತೃಷಿಯು ಆಗುವದೆಂದು
ಹಿಡಿದು ನೀಡಲು ತೆಗೆದುಕೊಳುತಲಿ
ನಡೆದನಾಗ ತನ್ನ ಸ್ಥಲಕೆ
ಬಿಡದೆ ಎಯ್ದು ಈರಯ್ಯ ಮಾತೆಯ ಕೇಳಿದನು ಆಗ''[೯]

ಶಿವನು ನೀಡಿದ ಬಹುದಿನದ ಕಜ್ಜಾಯ ನಿಮ್ಮಲ್ಲಿದೆ ನೀವು ಕೂಡಲೇ ನೀಡಿದರೆ ಹಸಿವು ತೀರುವುದು ಎಂದು ನುಡಿದು ತನ್ನ ಸ್ವಸ್ಥಾನಕ್ಕೆ ಮರಳುತ್ತಾನೆ. ಈರಯ್ಯ ತನ್ನ ತಾಯಿಯಿಂದ ನಡೆದ ವಿಚಾರವನ್ನು ತಿಳಿದು ಕೊಡೇಕಲ್ಲ ಬಸವಣ್ಣನನ್ನು ಹುಡುಕಿಕೊಂಡು ಹೋಗಿ ಅವನ ಶಿಷ್ಯನಾಗುತ್ತಾನೆ.

ಇವೆಲ್ಲವನ್ನು ನೋಡಿದರೆ ಕೊಡೇಕಲ್ಲ ಬಸವಣ್ಣ ಹಳೆಯ ಸಗರಕ್ಕೆ ಬಂದ ಸಂದರ್ಭದಲ್ಲಿ ಡಿಗ್ಗಿ ಸಂಗಮನಾಥ ಲಿಂಗೈಕ್ಯನಾಗಿದ್ದನೆಂದು, ಬಳಿಕ ನಾಗಾವಿಗೆ ಬಂದ ಸಂದರ್ಭದಲ್ಲಿ ತಾಯಿ ಮತ್ತು ಮಗ ಈರಪ್ಪಯ್ಯನ ಪ್ರಸ್ತಾಪ ಮಾತ್ರ ಬರುವುದರಿಂದ ಆಗ ಗುಂಡಬಸವಣ್ಣನೂ ಬದುಕಿರಲಿಲ್ಲವೆಂದು ಸ್ಪಷ್ಟವಾಗುತ್ತದೆ. ''ಧರ್ಮಕಲ್ಯಾಣದ'' ಪ್ರಸಿದ್ಧಿಯನ್ನು ತಿಳಿದು ನಾಗಾವಿಗೆ ಬಂದಿರುವ ಸಾಧ್ಯತೆಗಳಿವೆ. ನಂದಿಯಾಗಮ ಲೀಲೆಯಲ್ಲಿ ಧರ್ಮಕಲ್ಯಾಣದ ಉಲ್ಲೇಖ ನೇರವಾಗಿ ಬರದಿದ್ದರೂ ಪ್ರಾಸಂಗಿಕವಾಗಿ ಗುಂಡಬಸಪ್ಪನ ವಿಚಾರದಿಂದ ತಿಳಿಯಬಹುದು.

### ೩.೩. ಸ್ವರವಚನ ಸಾಹಿತ್ಯ

ಡಾ. ಬಿ.ಆರ್. ಹಿರೇಮಠ ಅವರು ಸಂಪಾದಿಸಿರುವ ''ನಾಗಾವಿ ಶರಣ ಗುರುಗುಂಡಬಸವನ ಅಂಕಿತದ ಸ್ವರವಚನಗಳು'' ಎನ್ನುವಂತಹ ಪದ್ಯಗಳಲ್ಲಿ ನಾಗಾವಿಯನ್ನು ''ಧರ್ಮಕಲ್ಯಾಣವೆಂದೂ'' ಅದರ ಸ್ಥಾಪಕನಾದ ಗುಂಡಬಸವಣ್ಣನನ್ನು ''ಧರ್ಮಕಲ್ಯಾಣಾಧೀಶನೆಂದೂ'' ಕರೆಯಲಾಗಿದೆ. ಈ ಸ್ವರವಚನಗಳ ಹಸ್ತಪ್ರತಿಯು ಕರ್ನಾಟಕ ವಿಶ್ವವಿದ್ಯಾಲಯದ, ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದಲ್ಲಿದೆ. ಈ ಹಸ್ತಪ್ರತಿಯು ಕಾಗದದ ಹಸ್ತಪ್ರತಿಯಾಗಿದ್ದು ೧೫, ೧೬ನೇ ಶತಮಾನದಲ್ಲಿ ರಚಿಸಿರಬಹುದಾದ ಸ್ವರವಚನಗಳು ಇವಾಗಿವೆ. ಇವುಗಳನ್ನು ಬರೆದವನು ಯಾರು ಎಂಬುದು ತಿಳಿದು ಬಂದಿಲ್ಲವಾದ್ದರಿಂದ, ಗುಂಡಬಸವಣ್ಣನ ಶಿಷ್ಯ ರಚಿಸಿರಬಹುದೆನ್ನಲಾಗಿದೆ.[೧೦]

ಈ ಸ್ವರವಚನಗಳಲ್ಲಿ ಗುಂಡಬಸವನನ್ನು 'ಸಿದ್ಧ', 'ಶಿವಯೋಗಿ', 'ಗದ್ದಿಗೆರಾಯ', 'ಧರ್ಮಕಲ್ಯಾಣ ಪುರಾಧೀಶ' 'ಸಂಗನಬಸವ' ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಗುಂಡಬಸವನ ಜನ್ಮಸ್ಥಳ ನಾಗಾವಿಯನ್ನು ಖಚಿತವಾಗಿ 'ಗುಂಡಬಸವೇಶ್ವರ ಚರಿತ್ರೆ'ಯಲ್ಲಿ ಮತ್ತು ನಂದಿಯಾಗಮ ಲೀಲೆಯಲ್ಲಿ ಉಲ್ಲೇಖಿತವಾಗಿರುವುದನ್ನು ಈ ಹಿಂದೆ ಚರ್ಚಿಸಲಾಗಿದೆ. ಅದರಂತೆ ಇಲ್ಲಿಯ ಸ್ವರವಚನಗಳಲ್ಲಿಯೂ ನಾಗಾವಿಯ ಪ್ರಸ್ತಾಪ ಬರುವುದನ್ನು ಕಾಣುತ್ತೇವೆ.

''ಮತ್ತದು ಪುಸಿಯಂದು ನಾಗಾವಿಗೆ ಬಂದು ಸಂಗನಬಸವ
ಭಕ್ತಿಗೆ ಧರ್ಮಕಲ್ಯಾಣವೆಂದು ನಿಂದೆ
ನಿಜಗುರು ಸಂಗನ ಬಸವ''[೧೧]

ಗುಂಡಬಸವಣ್ಣನು 'ಹಿಂದಿನ ಎಲ್ಲ ಜನ್ಮಗಳು ಪುಸಿಯಂದು ನಾಗಾವಿಗೆ ಬಂದು ಭಕ್ತಿಯನ್ನು ಮೆರೆದು ಧರ್ಮಕಲ್ಯಾಣವನ್ನು ಸ್ಥಾಪಿಸಿದೆ' ಎನ್ನುವಂತಹ ಮಾತುಗಳು ಬಂದಿರುವುದರಿಂದ ನಾಗಾವಿಯು ಧರ್ಮಕಲ್ಯಾಣವಾಗಿತ್ತು ಎನ್ನುವುದು ನಿಜಸಂಗತಿಯಾಗಿದೆ.

ಗುಂಡಬಸವಣ್ಣನು ಧರ್ಮಕಲ್ಯಾಣಕ್ಕೆ ಬಂದದ್ದು ಏಕೆ ಎನ್ನುವುದನ್ನು ಒಂದು ಪದ್ಯದಲ್ಲಿ ಈ ರೀತಿಯಲ್ಲಿ ಹೇಳಲಾಗಿದೆ.

''ಧರ್ಮದ ಹಾದಿಯ ತೋರಲಿ ಬಂದೆ
ಶರಣು ಶರಣು ಗುಂಡಬಸವಯ್ಯ
ಧರ್ಮದ ಹಾದಿಯ ತೋರಲಿ ಬಂದೆ ಧರ್ಮಕಲ್ಯಾಣಕೆ''[೧೨]

ಇಲ್ಲಿ ಗುಂಡಬಸವನು ಧರ್ಮಕಲ್ಯಾಣಕ್ಕೆ ಧರ್ಮದ ಹಾದಿಯನ್ನು ತೋರಿಸಲು ಬಂದಿದ್ದಾನೆ ಎನ್ನುವ ವಿಚಾರವನ್ನು ಬಹಳ ಅರ್ಥಪೂರ್ಣವಾಗಿ ಹೇಳಿದ್ದಾನೆ. ಹಾಗೆಯೇ ಇದೇ ಪದ್ಯದ ಕೊನೆಯ ಚರಣದಲ್ಲಿ ಭೂಮಿಯಲ್ಲಿ ಕೈಲಾಸವೆಂದು ಕರೆಯಲ್ಪಡುವಂಥ ಕ್ಷೇತ್ರ ನಾಗಾವಿ ಎಂದು ಬಣ್ಣಿಸಲಾಗಿದೆ. ಇಲ್ಲಿಯ ದೈವ ಧರ್ಮಕಲ್ಯಾಣದ ಸ್ವಾಮಿ ಬಸವೇಶ್ವರ ಎನ್ನುವ ಅಂಶವನ್ನು ಈ ಕೆಳಗಿನ ಪದ್ಯದಲ್ಲಿ ನೋಡಬಹುದು.

''ಭೂಮಿಗೆ ಅಧಿಕ ಭೂಕೈಲಾಸಪುರವೆಂದು
ಭೂಮಿಸ್ವಾಮಿಯು ದೇವರೆಂದು ನಂಬಿ
ಈ ಮಹಿಮನು ಮೆಚ್ಚಿ ಧರ್ಮಕಲ್ಯಾಣದ
ಸ್ವಾಮಿ ಗುರುಗುಂಡ ಬಸವ''[೧೩]

ಗುಂಡಬಸವಣ್ಣನು ಮಠವನ್ನು ಕಟ್ಟಿ ಧರ್ಮಕಲ್ಯಾಣ ಸ್ಥಾಪಿಸುವುದರ ಜೊತೆಗೆ ಬೋಧನೆಯನ್ನು ಮಾಡಿದನು ಮತ್ತು ಡಂಗೂರ ಪದಗಳನ್ನು ಸಾರಿದನು ಎನ್ನುವಂತ ವಿಚಾರವನ್ನು ಸ್ವರವಚನದಲ್ಲಿ ಹೀಗೆ ಹೇಳಲಾಗಿದೆ.

''ಹಿಂದೆ ಮಾಡಿದ ಪಾಪವೆಲ್ಲವು ಭರ್ಗಸ್ಯವೆಂದನು
ಮುಂದೆ ಸತ್ಯದಿಂದ ತಪ್ಪದೆ ನಡೆದರೆಂದನು
ನಿಂದೆ ಪರಸತಿ ಪರಧನವ ಜರಿಯಂದನು ನೀವು
ಬಂದು ಧರ್ಮಕಲ್ಯಾಣದಲಿ ನಿಂದಿರೆಂದನು

ಬಂದುದು ಮುಂದೆ ದೈವದ ದುರಿತವೆಂದನು
ಹಂಬಲಿಸಬೇಡ ಅತ್ತಲಿತ್ತಲೆಂದನು
ಬೆಂಬಳಲಿ ಧರ್ಮಕಲ್ಯಾಣ ಸತ್ತಲೆಂದನು
ಶಂಭುರಕ್ಷೆ ತಪ್ಪದೆಂದು ಸತ್ಯಕೆಂದನು.

ಬಸವಣ್ಣ ತಾನೆ ಬಂದು ಡಂಗೂರವೆಂದು ತಂದು
ವಸುಧೆಯೊಳು ಸಾರಿಸಿದ ಕೆಡದಿರೆಂದು
ನಸುವ ನಡೆವ ನಾನು ಕೇಳದೇಯಿಂದು ಸೊಕ್ಕಿ
ಮಸಿ ಮಣ್ಣಾಗಿ ಹೋದೆ ಎಚ್ಚರವದೆಂದು''[೧೪]

ಮುಂದೆ ನಡೆಯುವಂತಹ ವಿಚಾರಗಳನ್ನು ಡಂಗೂರ ಪದಗಳ ಮೂಲಕ ಸಾರುವುದು ಗುಂಡಬಸವಣ್ಣವು ದೈವಿಕ ಪುರುಷ ಎಂದು ಸಾರಿ ಹೇಳಿದಂತಿದೆ. ಈ ಹಿಂದೆ ಮಾಡಿದ ಎಲ್ಲ ಪಾಪಗಳನ್ನು ಕಳೆದುಕೊಳ್ಳಲು ಸತ್ಯವ ನುಡಿಯಿರಿ, ಪರಸತಿ, ಪರಧನವನೊಲ್ಲೆ ಎನ್ನುವಂತ ವಿಚಾರಗಳನ್ನು ಮಾಡಿರಿ. ಧರ್ಮಕಲ್ಯಾಣದ ಶ್ರೀರಕ್ಷೆ ಶಂಭುವಿನ ರಕ್ಷೆಯಾಗಿದೆ ಎಂದು ಹೇಳಿ ಧರ್ಮಕಲ್ಯಾಣವೆನ್ನುವುದು ನಿಜಕ್ಕೂ ಧರ್ಮದ ಉತ್ತುಂಗ ಶಿಖರದ ಕಳಸಪ್ರಾಯವೆಂಬುದನ್ನು ತಿಳಿಯಬಹುದು. ನಾಗಾವಿಯಲ್ಲಿ ನಿತ್ಯ ಧಾರ್ಮಿಕ ಕಾರ್ಯಗಳ ಜೊತೆಯಲ್ಲಿ ಧರ್ಮದ ಬೋಧನೆಯು ನಡೆಯುತ್ತಿತೆಂಬುದು ಈ ಸ್ವರವಚನಗಳು ತಿಳಿಸುತ್ತವೆ.

ಗುರು ಗುಂಡಬಸವನ ಅಂಕಿತದ ಸ್ವರವಚನಗಳು ಒಟ್ಟು ೬೩ ಸಿಕ್ಕಿವೆ. ಈ ಸ್ವರವಚನಗಳಲ್ಲಿ ಕೊನೆಯಲ್ಲಿ ಕೆಲವು ಮಂಗಳಾರತಿಯ ಪದಗಳನ್ನು ಹೋಲುತ್ತವೆ. ಗುಂಡಬಸವಣ್ಣನ ಪತ್ನಿಯಾದ ಜಕ್ಕಮ್ಮನನ್ನು ಸಹ ಈ ಪದ್ಯಗಳಲ್ಲಿ ಸ್ಮರಿಸಲಾಗಿದೆ.

''ಜಯತು ಶ್ರೀವರ ಮೂರ್ತಿ
ಜಯತು ಧರ್ಮಕಲ್ಯಾಣಿ
ಜಯ ಜಯ ಜಯತು ತಾಯಿ ಜಕ್ಕಮ್ಮ''

ಕೈಲಾಸದಿಂದ ಕಲಿಯುಗಕೆ ಇಳಿದು ಬಂದೆ
ಒಲಿದು ನಿಂದೆ ಭಕ್ತರ ಭಾಗ್ಯದಿಂದೆ
ಭವನ ಸವೆದು ಮಾಡಿದೆಯಲ್ಲ ನಮಗಿಂದು
ಐಮುಖನ ಅರ್ಧಾಂಗಿ ತಾಯಿ ಜಕ್ಕಮ್ಮ''[೧೫]

ಗುಂಡಬಸವಣ್ಣನು ಧರ್ಮಕಲ್ಯಾಣ ಪುರಾಧೀಶನೆಂದ ಮೇಲೆ ಅವನ ಧರ್ಮಪತ್ನಿಯನ್ನು ''ಧರ್ಮಕಲ್ಯಾಣಿ'' ಎಂದು ಕರೆದಿರುವುದರಲ್ಲಿ ಅರ್ಥವಿದೆ. ಗುರು ಗುಂಡಬಸವಣ್ಣನನ್ನು ನೆನೆಯುವಂತೆ ಜಕ್ಕಮ್ಮನನ್ನು ಈ ಪದ್ಯದಲ್ಲಿ ಜಯ ಜಯವೆಂದು ಹರಸಲಾಗಿದೆ. ಇಲ್ಲಿ ಇನ್ನೂ ಅನೇಕ (ಪದ್ಯಗಳಲ್ಲಿ) ಸ್ವರವಚನಗಳಲ್ಲಿ ಗುಂಡಬಸವನ ಗುರುವಾದ ಸಂಗಮೇಶ್ವರನನ್ನು ಆತನ ಸಂಬಂಧಿಯಾದ ತಿಪ್ಪಣ್ಣಯ್ಯನನ್ನು ಮಗನಾದ ಅಲ್ಲಮಯ್ಯನನ್ನು ಅನೇಕ ಕಡೆಯಲ್ಲಿ ಸ್ಮರಿಸಲಾಗಿದೆ.[೧೬]

''ಅಗಣಿತ ಮಹಿಮನು ಧರ್ಮಕಲ್ಯಾಣದ
ಅಘಹರನಿಗೆ ಆರತಿಯನೆತ್ತಿರೆ
ಬಗೆ ಬಗೆಯಲಿ ಸಂಗನ ಸುತನಿಗೊಲಿದನು
ಜಗದೀಶ ಅಲ್ಲಮನಿಗೆ ಆರತಿಯನೆತ್ತಿರೆ''[೧೭]

ಗುಂಡಬಸವಣ್ಣನ ಪುತ್ರನಾದ ಅಲ್ಲಮಯ್ಯನನ್ನು ಈ ಪದ್ಯದಲ್ಲಿ ಸ್ಮರಿಸಲಾಗಿದೆ. ಧರ್ಮಕಲ್ಯಾಣದ ಅಘಹರ ಎನ್ನುವಂತ ಮಾತನ್ನು ಹೇಳಲಾಗಿದೆ. ಇಲ್ಲಿ ಸಂಗನಸುತ ಎಂದರೆ ಗುಂಡಬಸವಣ್ಣ ಅವನಿಗೆ ಒಲಿದವನು ಅಲ್ಲಮಯ್ಯ ಎಂದು ಹೇಳಲಾಗಿದೆ.

ಧರ್ಮಕಲ್ಯಾಣವನ್ನು ಕುರಿತಂತೆ ಬಹಳ ಮಹತ್ವಪೂರ್ಣವಾದ ವಿಚಾರಗಳನ್ನು ಈ ಸ್ವರವಚನಗಳು ತಿಳಿಸಿವೆ. ಗುಂಡಬಸವಣ್ಣನು ನಾಗಾವಿಯಲ್ಲಿ ದೈವವೆಂದೇ ಕೆಲವು ಸ್ವರವಚನಗಳು ಬಿಂಬಿಸಿವೆ.

''ಇಮ್ಮಡಿ ಗುಂಡನಲ್ಲದೆ ದೈವವಿಲ್ಲ
ಉಮ್ಮಹ ಜನರು ಕೇಳಿರಿ ನೀವೀಸೊಲ್ಲ
ಇಮ್ಮಡಿ ಗುಂಡನಲ್ಲದೆ ದೈವವಿಲ್ಲ.
ನಾಲ್ಕು ವೇದಶಾಸ್ತ್ರ ಆಗಮಕೆ ನಿಲುಕದ
ಶ್ರುತಿ ಸಾರುತಲಿದೆ ಏಕಮುಖಿ
ವಾಕ್ಯ ಪರುಷಮೂರ್ತಿ ವಿವೇಕ
ಗುಂಡ ನೋಡಬಂದನು ತ್ರಿಲೋಕ''[೧೮]

ಹೀಗೆ ಗುಂಡನಲ್ಲದೆ ಬೇರೆ ದೈವವಿಲ್ಲ ಎಂದು ಸಾರಿ ಹೇಳಿವೆ. ಮಹಿಮಾ ಪುರುಷನಾದ ನಾಗಾವಿಯ ಶರಣನ ವಿಚಾರಧಾರೆಯನ್ನು ಅವನ ಧರ್ಮಕಾರ್ಯದ ವೈಖರಿಯನ್ನು ನೋಡಿದಾಗ ನಿಜಕ್ಕೂ ನಾಗಾವಿಯು ಭೂಮಿಯಲ್ಲಿರುವ ಕೈಲಾಸ ಎಂದು ಅನಿಸುತ್ತದೆ. ಹನ್ನೆರಡನೆಯ ಶತಮಾನದ ಬಸವಣ್ಣನೇ ಹದಿನಾರನೆಯ ಶತಮಾನದಲ್ಲಿ ಗುಂಡಬಸವಣ್ಣನಾಗಿ ಜನಿಸಿದನೆಂದು ಸ್ವರವಚನ ಓದುಗರಿಗೆ ಅನಿಸದೇ ಇರಲಾರದು. ಈ

ಸ್ವರವಚನಗಳಿಂದ ತಿಳಿಯುವ ಸ್ಪಷ್ಟ ಅಂಶವೆಂದರೆ, ನಾಗಾವಿಯು ಧರ್ಮಕಲ್ಯಾಣವಾಗಿ ಪುಣ್ಯಕ್ಷೇತ್ರವೆಂದು ಹೆಸರು ಪಡೆದಿತ್ತೆಂದು ತಿಳಿಯಬಹುದು.

**೩.೪. ಈರಪ್ಪಯ್ಯನ ಡಂಗೂರ ಪದಗಳು**

ಈರಪ್ಪಯ್ಯನ ಚಾರಿತ್ರಿಕ ವಿವರಗಳ ಬಗೆಗೆ ಅನೇಕ ತೊಡಕುಗಳಿವೆಯಾದರೂ ನೆಲೆ ಮಾತ್ರ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ನಾಗಾವಿ ಎಂಬುದು ಸ್ಪಷ್ಟವಾಗಿದೆ. ನಾಗಾವಿಯಲ್ಲಿ ಈರಪ್ಪಯ್ಯನ ಗದ್ದಿಗೆ ಇದ್ದು ಇಂದಿಗೂ ಸಹ ಕೊಡೇಕಲ್ಲ ಮಠದವರಿಂದ ಪೂಜೆಗೊಳ್ಳುತ್ತದೆ. ಈತ ಕೊಡೇಕಲ್ಲ ಬಸವನ ಮುಖ್ಯ ಶಿಷ್ಯರಲ್ಲೊಬ್ಬನಾಗಿದ್ದಾನೆ. ಕೊಡೇಕಲ್ಲ ಬಸವನ ಕೃಪೆಯಿಂದ ಸತ್ತ ಕತ್ತೆಗೆ ಜೀವ ಬರಿಸುವ ಪವಾಡ ಮಾಡಿದ್ದರಿಂದ ಈರಪ್ಪಯ್ಯನ ಸಂತತಿಯವರಿಗೆ ಕತ್ತೇ ಮಠದವರು ಎಂದು ಹೆಸರು ಬಂದಿದೆ. ನಂದಿಯಾಗಮ ಲೀಲೆಯಲ್ಲಿ ಈರಪ್ಪಯ್ಯನ ಕುರಿತು ಬಂದಿರುವ ವಿಚಾರಗಳನ್ನು ಈ ಹಿಂದೆ ನೋಡಿದ್ದೇವೆ.

ಕೊಡೇಕಲ್ಲ ಬಸವಣ್ಣನು ನಾಗಾವಿಗೆ ಗುಂಡಬಸಪ್ಪನಲ್ಲಿ ಬಂದಾಗ ಆ ಮನೆಯಲ್ಲಿ ಈರಪ್ಪಯ್ಯ ಇದ್ದುದರಿಂದ ಗುಂಡಬಸವಣ್ಣನ ಮಗ ಈರಪ್ಪಯ್ಯನೆಂದು ಊಹಿಸಬಹುದಾಗಿದೆ. ಗುಂಡಬಸವಣ್ಣ ಹಾಗೆ ಈರಪ್ಪಯ್ಯನು ಪವಾಡವನ್ನು ಮಾಡಿರುವುದು ಮತ್ತು ಡಂಗೂರ ಪದಗಳನ್ನು ಸಾರಿರುವುದನ್ನು ನೋಡಿದರೆ, ಗುಂಡಬಸಪ್ಪನ ಮಗ ಎನ್ನುವದರಲ್ಲಿ ಸತ್ಯವಿದೆ ಎಂದು ತೋರುತ್ತದೆ. ಈರಪ್ಪಯ್ಯ ರಚಿಸಿದನೆನ್ನಲಾಗುವ ಡಂಗೂರ ಪದಗಳು ಒಟ್ಟು ಮೂರು. ನಾಗಾವಿಯನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾಗಿರುವ ಈ ಡಂಗೂರ ಪದಗಳು 'ಧರ್ಮಕಲ್ಯಾಣ'ದ ಉಲ್ಲೇಖವನ್ನು ಮಾಡದೇ ಇದ್ದರೂ ಸಹ ಗುಂಡಬಸವನ ಕುರಿತು ಹೇಳಿದಂತ ಪದ್ಯಗಳಿವೆ ಎಂದು ತಿಳಿಯಬಹುದು. ನಾಗಾವಿಯನ್ನು 'ನಾಗವಾಲಿ' ಎಂದು ಕರೆದಿರುವುದು ವಿಶೇಷವಾಗಿದೆ.

''ನಾಗವಾಲಿಯ ಪ್ರಸ್ತಮಾಡಿ ಸಾಗುತಾರೆ
ರಾಗ ಬ್ಯಾಗದಿಂದ ರಂಗಪಟ್ಟಣ ತವಕನಿಲ್ಲದೆ
ಸೊಗಸಿನ (ಕೆಲಸಗಳು) ಕಾರ್ಯಗಳು ರಾಕ್ಷಸಸರಿಂದಾಗುತ್ತೆತೆ
ಕೂಗಬಂದೆ ಕೂಲಿಕಾರ ಊಳಿಗದವ ನೋಡಿ''[೧೯]

ನಾಗಾವಿಯಲ್ಲಿ ಪೂಜೆಯನ್ನು ಮಾಡಿ ಮುಂದೆ ಸಾಗುತ್ತಾರೆ ಎಂದರೆ ನಾಗಾವಿಯು ಧರ್ಮಕಲ್ಯಾಣ ಪ್ರಸಿದ್ಧಿಯನ್ನು ಪಡೆದಿತ್ತು ಎನ್ನುವುದು ಪ್ರಮುಖ ಅಂಶವಾಗಿದೆ. ರಾಕ್ಷಸರಿಂದ ಒಳ್ಳೆಯ ಕೆಲಸಗಳು ನಡೆಯುತ್ತವೆ ಎಂಬುದು ಮುಂದಿನ ವಿನಾಶದ ಸೂಚನೆ ಎಂದು ತಿಳಿಯಬಹುದು. ಈರಪ್ಪಯ್ಯನು ನಾಗಾವಿಯಲ್ಲಿ ಇದ್ದು ಗುಂಡ ಬಸಪ್ಪನ ಕುರಿತಂತೆ ಪದ್ಯಗಳನ್ನು ಬರೆದನೆನ್ನಲು ಈ ಕೆಳಗಿನ ಪದ್ಯದ ಉದಾಹರಣೆಯಿಂದ ತಿಳಿಯಬಹುದು.

''ದಕ್ಷಿಣಕೆ ನಾಗಾವಿ ಪುರದ ಗುರು ಭದ್ರ
ಪಶ್ಚಿಮಕೆ ತಾಬಂದು ಬರೆದ ಒಂದು
ವಾಕ್ಯ ಬಸಪ್ಪಯ್ಯ ಗೊಲಿದ
ಸಾಕ್ಷಾತ ಈರಪ್ಪಯ್ಯ ತಾ ಬಂದು ಬರೆದ''[೨೦]

ಈರಪ್ಪಯ್ಯನ ಈ ಡಂಗುರ ಪದಗಳಲ್ಲಿ 'ಧರ್ಮಕಲ್ಯಾಣದ' ಉಲ್ಲೇಖ ನೇರವಾಗಿ ಬರದಿದ್ದರೂ ಸಹ ಅದರ ಕೇಂದ್ರ ನಾಗಾವಿಯನ್ನು ಕುರಿತಂತೆ ಅನೇಕ ವಿಚಾರಗಳು ಬಂದಿರುವುದರಿಂದಲೂ ಮತ್ತು ಈರಪ್ಪಯ್ಯನ ಗದ್ದಿಗೆ ನಾಗಾವಿಯಲ್ಲಿ ಇಂದಿಗೂ ಇರುವುದರಿಂದ ಈರಪ್ಪಯ್ಯನ ಡಂಗೂರ ಪದಗಳು ಮಹತ್ವವನ್ನು ಪಡೆದುಕೊಂಡಿವೆ.

ನಮಗೆ ತಿಳಿದಿರುವಂತೆ ಈ ನಾಲ್ಕು ಕೃತಿಗಳಲ್ಲಿ ಧರ್ಮಕಲ್ಯಾಣವನ್ನು ಕುರಿತಂತೆ ಮಾಹಿತಿ ಸಿಗುತ್ತದೆ. ನಾಗಾವಿಯ ಭಾಗದಲ್ಲಿ ಮತ್ತು ಗುಂಡಬಸವನ ಶಿಷ್ಯಪರಂಪರೆಯ ಸ್ಥಳಗಳಲ್ಲಿ ಗುಂಡಬಸವನ ಕುರಿತಂತೆ ಹಾಗೂ ಧರ್ಮಕಲ್ಯಾಣ ಕುರಿತಂತೆ ಹಸ್ತಪ್ರತಿಗಳೂ ಸಿಗುವ ಸಾಧ್ಯತೆ ಇದೆ. ಜನರು ತಮ್ಮ ಮುಗ್ಧತೆಯಿಂದ ಇನ್ನೂ ಅವುಗಳನ್ನು ಪೂಜಿಸುತ್ತಿದ್ದಾರೆ. ಅವುಗಳನ್ನು ಪತ್ತೆ ಹಚ್ಚಿ ವಿಷಯ ಸಂಗ್ರಹಿಸಿದರೆ ಇನ್ನೂ ಹೆಚ್ಚಿನ ಮಾಹಿತಿಗಳು ಸಿಗುವುದರಲ್ಲಿ ಸಂದೇಹವಿಲ್ಲ.

**ಟಿಪ್ಪಣಿಗಳು**

೧. ವಚನ ಸ್ವರವಚನ (ಸಂ), ಶಿವಾನಂದ, ಎಸ್. ವಿರಕ್ತಮಠ, ಪ್ರಸ್ತಾವನೆ, ಪುಟ.೨೨

೨. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.xv

೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.೯೮

೪. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.೧೧೯

೫. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.೧೨೫

೬. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.೧೩೩

೭. ನಂದಿಯಾಗಮ ಲೀಲೆ (ಸಂ), ಇರಸಂಗಯ್ಯ ಗ. ಕೊಡೇಕಲ್ಲಮಠ, ಪುಟ.೨೨೪

೮. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಸಂಗಪ್ಪಯ್ಯ ಸ್ವಾಮಿ, ಪ್ರಸ್ತಾವನೆ, ಪುಟ.xvi

೯. ನಂದಿಯಾಗಮ ಲೀಲೆ (ಸಂ), ಇರಸಂಗಯ್ಯ ಗ. ಕೊಡೇಕಲ್ಲಮಠ, ಪುಟ.೨೨೪

೧೦. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ

೧೧ ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೨೩

೧೨. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೫೭

೧೩. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೫೭

೧೪. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೧೯

೧೫. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೫೬

೧೬. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೫೬

೧೭. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೫೮

೧೮. ಬಸವಪಥ ಸಂಪುಟ ೮, (ಸಂ) ಡಾ.ಬಿ.ಆರ್. ಹಿರೇಮಠ, ಪದ್ಯ.೬೦

೧೯. ವಚನ ಸ್ವರವಚನ (ಸಂ), ಶಿವಾನಂದ, ಎಸ್. ವಿರಕ್ತಮಠ, ಪ್ರಸ್ತಾವನೆ, ಪುಟ.೪೨೫

೨೦. ವಚನ ಸ್ವರವಚನ (ಸಂ), ಶಿವಾನಂದ, ಎಸ್. ವಿರಕ್ತಮಠ, ಪ್ರಸ್ತಾವನೆ, ಪುಟ.೪೨೬

* * *

ಅಧ್ಯಾಯ ನಾಲ್ಕು

## ಧರ್ಮಕಲ್ಯಾಣ ಮತ್ತು ಗುಂಡಬಸವೇಶ್ವರ

೪.೧ ಜನನ-ಬಾಲ್ಯ-ಮದುವೆ

೪.೨ ಕಾರ್ಯಕ್ಷೇತ್ರ ಮತ್ತು ಪವಾಡಗಳು

೪.೩ ಧರ್ಮಕಲ್ಯಾಣ ಸ್ಥಾಪನೆ ಮತ್ತು ಬೋಧನೆ

೪.೪ ಗುರುಪರಂಪರೆ

೪.೪.೧ ಪರಮಾನಂದ ಪ್ರಭು

೪.೪.೨ ದಿಗ್ಗಿ ಸಂಗಮನಾಥ

೪.೫ ಗುಂಡಬಸವಣ್ಣನ ಐಕ್ಯ

## ಧರ್ಮಕಲ್ಯಾಣ ಮತ್ತು ಗುಂಡಬಸವೇಶ್ವರ

ಧರ್ಮಕಲ್ಯಾಣವನ್ನು ಸ್ಥಾಪಿಸಿದ ಗುಂಡಬಸವಣ್ಣನು ಧಾರ್ಮಿಕವಾಗಿ ಆರೂಢಮಾದರಿ ಸಂತನಾಗಿದ್ದಾನೆ. ಗುಂಡಬಸವಣ್ಣನು ಸಾಮಾಜಿಕವಾಗಿ ಜನಪರ ವ್ಯಕ್ತಿಯೂ ಆಗಿದ್ದಾನೆ. ಇವನು ಆತ್ಮಕಲ್ಯಾಣಕ್ಕಾಗಿ ದುಡಿಯುವುದರ ಜೊತೆಗೆ ಲೋಕಕಲ್ಯಾಣಕ್ಕಾಗಿ ಮಿಡಿಯುವಂತವನು ಆಗಿದ್ದಾನೆ. ಇಂತಹವರಿಗೆ ಮುಖ್ಯವಾದದು ಚಾರಿತ್ರ್ಯವೇ ಹೊರತು ಚರಿತ್ರೆಯಲ್ಲ. ಹೀಗಾಗಿ ಗುಂಡಬಸವಣ್ಣನವರ ಅಭ್ಯಾಸದಲ್ಲಿ ನಮಗೆ ಚರಿತ್ರೆಯು ಮುಖ್ಯವಾಗುತ್ತದೆ. ಈ ಚರಿತ್ರೆಯನ್ನು ಮಹಾಪುರುಷರ ಸಮಕಾಲೀನ ಇಲ್ಲವೆ ಉತ್ತರಕಾಲೀನ ವ್ಯಕ್ತಿಗಳು ಬರೆದಿರಬಹುದು. ಹೀಗಾಗಿ ಅವರು ತಮ್ಮ ಬಗ್ಗೆ ಬರೆಯಲಿಲ್ಲ. ಏನಾದರೂ ಬರವಣಿಗೆ ಇದ್ದರೆ ಅದೆಲ್ಲ ಪ್ರಾಸಂಗಿಕವಾಗಿ ಬಂದು ಸೇರಿದುದು. ಆದರೆ ಮಹಾಪುರುಷರನ್ನು ಕುರಿತು ಬರೆಯುವಾಗಲೆಲ್ಲ ಭಾರತೀಯರ ಬರವಣಿಗೆಯಲ್ಲಿ ಚರಿತ್ರೆ ಹೋಗಿ ಪುರಾಣವಾಗುತ್ತದೆ. ಆದರೆ ಗುಂಡಬಸವೇಶ್ವರ ಚರಿತ್ರೆಯು ಆತನ ಜೀವನ, ಬಾಲ್ಯ, ಮದುವೆ, ಕಾರ್ಯಕ್ಷೇತ್ರ ಬೋಧನೆ, ಧರ್ಮಕಲ್ಯಾಣ ಸ್ಥಾಪನೆ, ಐಕ್ಯ ಹೀಗೆ ಎಲ್ಲ ವಿಚಾರವನ್ನು ತಿಳಿಸುತ್ತದೆ.

### ೪.೧ ಜನನ-ಬಾಲ್ಯ-ಮದುವೆ

''ಗುಂಡಬಸವೇಶ್ವರನು ಭೂಮಿಯಲ್ಲಿ ಅವತರಿಸುವುದಕ್ಕಿಂತ ಪೂರ್ವದಲ್ಲಿ ಶಿವನ ಒಡ್ಡೋಲಗದಲ್ಲಿ ಸಭೆ ನಡೆಯುತ್ತದೆ. ಈ ಸಭೆಯಲ್ಲಿ ಭೂಲೋಕದ ಜನರನ್ನು ಉದ್ಧರಿಸಲು ಸಮರ್ಥ ವ್ಯಕ್ತಿಯನ್ನು ಕಳುಹಿಸಿಕೊಡಲು ಚರ್ಚೆ ನಡೆಯುತ್ತದೆ. ಗುಂಡಬಸವನನ್ನು ಕರೆದು ಈ ಹಿಂದೆ ಹಳೆಯ ಸಗರದಲ್ಲಿ ಗುರು ಒಬ್ಬ ಜನಿಸಿದ. ಲೋಕಕಲ್ಯಾಣಕ್ಕಾಗಿ ನಾನಾ ಬಗೆಯ ಪ್ರಯತ್ನ ನಡೆಸಿದರೂ ಲೋಕವನ್ನು ತಿದ್ದಲಾಗಲಿಲ್ಲ. ಆದ್ದರಿಂದ ಈ ಕಾರ್ಯವನ್ನು ನೀನು ಕೈಗೊಂಡು ಭೂಲೋಕದ ಜನರನ್ನು ಉದ್ಧರಿಸುವಂತೆ ಅಪ್ಪಣೆ ಮಾಡುತ್ತಾರೆ.''[೧] ಈ ವಿಷಯ ಗುಂಡಬಸವೇಶ್ವರ ಚರಿತ್ರೆಯಲ್ಲಿ ಈ ಕೆಳಗಿನಂತೆ ಉಲ್ಲೇಖಗೊಂಡಿರುವುದನ್ನು ಗಮನಿಸಬಹುದು.

''ಬಾಳಲೋಚನನಲ್ಲಿ ಕಳುಹಿಸಿಕೊಂಡರು
ಥಾಳರು ಗೋಮುಖದವರು |
ಇಳೆಯೊಳು ಹಳೆಯಸಗರವೆಂಬ ಊರಲ್ಲಿ
ಬೆಳಗುಳ್ಳ ಗುರು ಜನಿಸಿದನು''

''ಏನಹೇಳಲಿ ಲೋಕ ಬಹಳ ತಪ್ಪಿತು ಮಾರ್ಗ
ಕೇಳದಾದರು ಬೋಧೆಗಳನು |

ಹೇಳರೆನಲಿ ಬೇಡ ಕೇಳೆ ಪರ್ಯ ನಾವು
ಕೋಳ್ಹೋಗದಿರಿ ಎಂಬರೆಲ್ಲ''[೨]

''ಇಲ್ಲಿ ಬಾಳಲೋಚನನಲ್ಲಿ ಎಂದರೆ ಪ್ರಾಣಲಿಂಗಸ್ಥಲದ ತಂದೆ ದಿಗ್ಗಿ ಸಂಗಮನಾಥನಾಗಿದ್ದಾನೆ''[೩] ಹಳೆಯ ಸಗರೆಂಬ ಊರಲ್ಲಿ ಎಂದರೆ ಇಂದಿನ ತಾಲೂಕು ಸ್ಥಳವಾದ ಶಹಾಪುರವಾಗಿದೆ. ಅಂದರೆ ಶಹಾಪುರದ ಹತ್ತಿರ ದಿಗ್ಗಿಯಲ್ಲಿ ಸಂಗಮನಾಥನು ಜನಿಸಿ ಲೋಕದ ಜನರನ್ನು ಉದ್ಧಾರ ಮಾಡಲು ಪ್ರಯತ್ನಿಸಿದನು ಎನ್ನುವ ವಿಚಾರವನ್ನು ನಾವಿಲ್ಲಿ ಗಮನಿಸಬಹುದು.

ಗುಂಡಬಸವಣ್ಣನು ಹುಟ್ಟುವುದಕ್ಕಿಂತ ಪೂರ್ವದಲ್ಲಿ ತಿಪ್ಪಣ್ಣಯ್ಯನೆಂಬ ಮಹಿಮನು ನಾಗಿಸೆಟ್ಟಿ ಮತ್ತು ಕಾಮಮ್ಮ ಎಂಬ ದಂಪತಿಗಳಿಗೆ ''ಶಿವನ ಒಂದು ಮುಖವು ಇಲ್ಲಿ ಅವತರಿಸುತ್ತದೆ ಎನ್ನುವಂತಹ ವಿಚಾರವನ್ನು ತಿಳಿಸುತ್ತಾನೆ.''[೪]

''ಪುರವು ನಾಗಾವಿಯೊಳರೆ ನಾಗಿಸೆಟ್ಟಿಯ
ವರ ಸತಿ ನಾಮ ಕಾಮಮ್ಮ
ಹರನ ಭಕ್ತರು ಮುಗ್ಧಭಾವದಲಿರುತಿರೆ
ಪರಯ ಮೂರುತಿ ನೆಲೆಸಿದನು''

''ಒಪ್ಪದಿಂದಲಿ ಗುಂಡ ಗರ್ಭದೊಳಿರುತಿರೆ
ತಿಪ್ಪಣ್ಣಯ್ಯನೆಂಬ ಮಹಿಮ
ತಪ್ಪದೇ ಶಿವನೇಕ ಮುಖವಿಲ್ಲಿ ಬಹುದೆಂದು
ಇಪ್ಪ ಮಹಿಮೆಯನೇನೆಂಬ''[೫]

ಹೀಗೆ ಗುಂಡಬಸವಣ್ಣನು ನಾಗಾವಿಯಲ್ಲಿ ನಾಗಿಸೆಟ್ಟಿ ಮತ್ತು ಕಾಮಮ್ಮ ದಂಪತಿಗಳ ಮಗನಾಗಿ ಹುಟ್ಟುತ್ತಾನೆ. ಹುಟ್ಟಿದ ಐದನೇ ದಿನದ ಒಳಗೆ ಬಸವನೆಂದು ಹೆಸರಿಡುತ್ತಾರೆ. ತಿಪ್ಪಣ್ಣಯ್ಯನು ಬಸವ ಹುಟ್ಟಿದ ಐದು ದಿನಕ್ಕೆ ನೋಡಲು ಬರುತ್ತಾನೆ. ತೊಟ್ಟಿಲಲ್ಲಿ ಮಲಗಿದ್ದ ಶಿಶುವನ್ನು ನೋಡಿ ಇವನು ಸತ್ಯಶರಣ ಸರ್ವಾಂಗಲಿಂಗಿ ಎಂದು ನುಡಿದನು. ಶಿವನ ಏಕಮುಖದ ಈ ಅವತಾರವ್ಯಕ್ತಿ ಇಲ್ಲಿ ಮನೆ ಕಟ್ಟುತ್ತಾನೆ, ಮಠ ಬೆಳೆಸುತ್ತಾನೆ ಎಂದು ಆ ನೆಲವನ್ನು ಹಸನು ಮಾಡುತ್ತಲಿದ್ದ. ತಿಪ್ಪಣ್ಣಯ್ಯ ಈ ರೀತಿ ಮಾಡುವುದನ್ನು ಕಂಡು ಜನರು ಹಾವಿನ ಹೆಜ್ಜೆಯನ್ನು ಹಾವು ಬಲ್ಲವು, ಸಾಮಾನ್ಯ ಜನಗಳಿಗೆ ಅದು ಸಾಧ್ಯವಿಲ್ಲ ಎನ್ನುತ್ತಿದ್ದರು. ದೇವಭಕ್ತರ ಮಹಿಮೆಯನ್ನು ಭವ ಜೀವಿಗಳು ಅರಿಯಲು ಸಾಧ್ಯವಿಲ್ಲ ಎಂದು ಮಾತನಾಡಿಕೊಳ್ಳುತ್ತಾರೆ.

ಗುಂಡಬಸವಣ್ಣನು ಐದಾರು ವರುಷದ ಬಾಲಕನಾಗಿದ್ದ ಸಂದರ್ಭದಲ್ಲಿ ತಿಪ್ಪಣ್ಣಯ್ಯನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಅವನಿಗೆ ಹೀಗೆ ಹೇಳುತ್ತಾನೆ.

''ಕೇಳು ನೀ ಬಸವಣ್ಣ ಹೇಳುವ ಮಾತನು
ಭಾಳಲೋಚನ ಭಕ್ತನೊಬ್ಬ।

ಹಳೆಯ ಸಗರದ ಹೊರಗೆ ಮಠಕಟ್ಟಿ ತಾ
ಇಳೆಯೊಳು ಅಮರಕಲ್ಯಾಣೆನಿಸಿ

''ತಿಥಿ ನಾಲ್ಕು ಮಾಡಿದ ಆತ ತಾ ಬಸವಣ್ಣ
ಮತ್ತೆ ಭಕ್ತರು ಬೋಳರೆನಿಸಿ
ಶ್ರುತಿಧರ್ಮ ಬೋಧೆಯ ಸಾರಿಸುತಲಿಹನ
ಮಥಿಸಿ ಮರ್ತ್ಯಲೋಕದೊಳಗೆ''[೬]

ಬಸವಣ್ಣಾ, ಕೇಳು ಭಾಳಲೋಚನ ಭಕ್ತನೊಬ್ಬ ಹಳೆಯ ಸಗರದ ಹೊರಗೆ ಮಠಕಟ್ಟಿ, ಭೂಮಿಯಲ್ಲಿ ಅದನ್ನು ಅಮರ ಕಲ್ಯಾಣವನ್ನಾಗಿ ಮಾಡಿದ. ನಾಲ್ಕು ತಿಥಿಗಳಲ್ಲಿ ಉತ್ಸವ ಮಾಡುವನು. ಧರ್ಮವನ್ನು ಸಾರಲಿಕ್ಕೆ ಭಕ್ತರು ಮತ್ತು ಬೋಳರೆನ್ನುವಂಥ ಅನುಯಾಯಿಗಳನ್ನು ಬೆಳೆಸಿದನೆಂದು ಹೇಳುತ್ತಾನೆ. ಈ ಮಾತನ್ನು ಕೇಳಿ ಬಸವಣ್ಣ ''ನಾನೂ ಭಕ್ತರು ಬೋಳರನ್ನು ಬೆಳೆಸುತ್ತೇನೆ, ನಾಲ್ಕು ತಿಥಿ ಮಾಡುತ್ತೇನೆ, ಸಂಗಮೇಶ್ವರನ ಡಂಗೂರ ಬೋಧೆ ಹೇಳುತ್ತೇನೆ'' ಎಂದು ನುಡಿಯುತ್ತಾನೆ. ಬಾಲಕ ಬಸವಣ್ಣನ ಇಂಥ ಮಾತುಗಳನ್ನು ಕೇಳಿ ತಿಪ್ಪಣ್ಣಯ್ಯ ''ಸಂತೋಷದಿಂದ ನಿನಗಲ್ಲದೆ ಮತ್ತಾರಿಗೂ ಸಾಧ್ಯವಿಲ್ಲ. ಇಂಥ ಸತ್ವಗುಣಗಳಿರುವುದರಿಂದಲೆ ನಿನಗೆ ಇದು ಸಾಧ್ಯ'' ಎಂಬ ಮಾತುಗಳನ್ನು ಹೇಳುತ್ತಾನೆ.

ಗುಂಡಬಸವಣ್ಣನು ಬಾಲ್ಯದಲ್ಲಿಯೇ ತತ್ವಬೋಧೆಯನ್ನು ಅರಿತವನಾಗಿರುವುದರಿಂದ ಅಮರಕಲ್ಯಾಣದ ಗುರುವಿನಂತೆ ನಾನು ಮುಂದೆ ಮಠವನ್ನು ಕಟ್ಟುತ್ತೇನೆ ಎನ್ನುವಂಥ ಮಾತುಗಳನ್ನು ಹೇಳಿರುವುದರಿಂದ ಮುಂದೆ ನಿರ್ಮಾಣವಾಗಲಿರುವ ಧರ್ಮಕಲ್ಯಾಣದ ಸುಳುಹು ಅಂದು ಬಾಲಕ ಬಸವಣ್ಣನ ಮಾತುಗಳಿಂದ ತಿಳಿಯುತ್ತವೆ. ಬಸವಣ್ಣನು ಹತ್ತು ಹನ್ನೆರಡು ವರುಷದವನಾಗಲು ತಡಪು, ನಡುಕಟ್ಟು, ಕಸಿಯಂಗಿ ನಿಟ್ಟಲ್ಲಿ ಧರಿಸಿ ಬೋಧೆಯನ್ನು ಆರಂಭಿಸಿದನು. ತಿಪ್ಪಣ್ಣಯ್ಯನು 'ಬಸವಣ್ಣಾ, ನಿನ್ನ ಹೆಸರಿಗೆ ತಕ್ಕಂತೆ ನೀನು ಪ್ರಸಾರ ಮಾಡು' ಎಂದು ಆಗಾಗ ನುಡಿಯುತ್ತಿದ್ದನು. ತಿಪ್ಪಣ್ಣಯ್ಯ ಬಸವಣ್ಣನ ಬಾಲ್ಯದಲ್ಲಿ ಮುಂದಿನ ದಿನಗಳಲ್ಲಿ ಆಗುವಂಥ ಮಹತ್ತರವಾದ ಕಾರ್ಯವನ್ನು ಮನಗಂಡಿದ್ದನು. ಹೀಗಾಗಿ ಬಸವಣ್ಣನಿಗೆ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದನು. ಆದರೆ ಬಸವಣ್ಣನ ಗುರು ದಿಗ್ಗಿಯ ಸಂಗಮನಾಥನೆ ಎಂಬುದನ್ನು ಪ್ರಾರಂಭದಲ್ಲಿ ''ಅಮರಕಲ್ಯಾಣದ ಗುರು'' ಎನ್ನುವ ಅಂಶಗಳಲ್ಲಿ ತಿಳಿದಿದ್ದೇವೆ. ಹಳೆಯ ಸಗರದಲ್ಲಿ ಮಠವನ್ನು ಕಟ್ಟಿ ಬೆಳೆಸಿದ ರೀತಿಯಲ್ಲಿಯೇ ಬಸವಣ್ಣ ಬೆಳೆಯಬೇಕೆಂದು ತಿಪ್ಪಣ್ಣಯ್ಯ ಬಹುಶಃ ಅಂದುಕೊಂಡಿರಬೇಕು. ಆದ್ದರಿಂದಲೇ ಬಸವಣ್ಣನನ್ನು ಪ್ರಾರಂಭದಿಂದಲೇ ದೈವೀ ಪುರುಷನೆಂದು ಅವನ ಜೊತೆಯಲ್ಲಿಯೇ ಕಾಲ ಕಳೆದನೆಂದು ಅನಿಸುತ್ತದೆ.

ಗುಂಡಬಸವಣ್ಣನು ಬೆಳೆದು ದೊಡ್ಡವನಾಗುತ್ತಿದ್ದಂತೆಯೇ ತಂದೆ ನಾಗಿಶೆಟ್ಟಿಯು ಮಗನ ಮದುವೆಯನ್ನು ಮಾಡುವ ನಿರ್ಧಾರಕ್ಕೆ ಬರುತ್ತಾನೆ. ಮದುವೆಗಾಗಿ ಗುಂಡಗುರ್ಕಿ ತುಪ್ಪದ ಶಂಕರ ಶೆಟ್ಟಿಯ ಮನೆಯಲ್ಲಿ ಕನ್ಯೆಯನ್ನು ನೋಡಿಬರುತ್ತಾರೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಬಸವಣ್ಣನು ವ್ಯಾಪಾರ ಮಾಡುವಂತಹ ಶೆಟ್ಟರ ವಂಶದವನು ಎಂಬುದನ್ನು ಗುಂಡಬಸವೇಶ್ವರ ಚರಿತ್ರೆಯ ಉಲ್ಲೇಖದಂತೆ ಬಸವಣ್ಣನು ಬಣಜಿಗ ಶೆಟ್ಟರ ವಂಶದವನು ಎಂಬುದನ್ನು ಈ ಕೆಳಗಿನ ಪದ್ಯಗಳ ಉಲ್ಲೇಖದಿಂದ ತಿಳಿಯಬಹುದು.

‘‘ಹಸುಬೆಯ ಬಣಸಿಯೆನೆಂದು ಎನುತಲಿ
ಬಸವಣ್ಣ ತಾ ಕೈಕೊಂಡು
ವಸುಧೆಯೊಳಗೆ ಉಳ್ಳ ಎಪ್ಪತ್ತೆರಡು ಕೇಣಿ
ಹಸುಬೆಯನಾಗ ತುಂಬಿದನು’’[೭]

‘‘ಬೆಲ್ಲಕೊಬ್ಬರಿ ತಿಂದ ಸೊಕ್ಕಿದ ಬಣಜಿಗ
ನಿಲ್ಲದೆ ಕುಣಿದಾಡುತಹನೆ
ಅಲ್ಲೇನ ನೋಡಿ ನಡೆ ಹೋಗಬೇಕೆಂದು
ಸೊಲ್ಲಹೇಳುತ ಹೋಗುತಿರ್ದ’’[೮]

ಹೀಗೆ ಬಣಜಿಗ ಎನ್ನುವ ಶಬ್ದ ಉಲ್ಲೇಖವಾಗುವುದರ ಜೊತೆಗೆ ತಂದೆಯ ಹೆಸರು ನಾಗಿಸೆಟ್ಟಿಯೆಂದು ಮತ್ತು ಹೆಣ್ಣು ಕೊಟ್ಟ ಮಾವನ ಹೆಸರು ಶಂಕರಶೆಟ್ಟಿ ಎಂದು ಇರುವುದರಿಂದ, ಬಣಜಿಗ ಶೆಟ್ಟರ ವಂಶದವನೆಂದು ತಿಳಿಯುತ್ತದೆ.

ಬಸವಣ್ಣನಿಗೆ ಗುಂಡಗುರಕಿ ಗ್ರಾಮದ ಶಂಕರಶೆಟ್ಟಿ ಮತ್ತು ಲಕ್ಕಾಯಿ ಎಂಬುವರ ಮಗಳಾದ ಜಕ್ಕಾಂಬೆ ಎಂಬವಳನ್ನು ನಿಶ್ಚಯ ಮಾಡುತ್ತಾರೆ.

‘‘ನೋಡಿ ಬಂದೆ ಬಸವಣ್ಣನಿಗೆ ವರನೆಂದು
ಆಡಿ ತೆರಳಿನಾಗಿ ಸೆಟ್ಟಿ
ನೋಡನೋಡುತ ಗುಂಡಗುರಕಿಯೊಳಗೆ ಹೋಗಿ
ಕೊಡಗೂಸುಂಟೆಂದು ಕೇಳಿದರೆ’’[೯]

ಹೀಗೆ ಗುಂಡಗುರಕಿಯಲ್ಲಿ ಕನ್ಯೆಯನ್ನು ನೋಡಿ ಬಂದರು. ಗುಂಡಗುರಕಿ ಗುಲಬರ್ಗಾ ಜಿಲ್ಲೆಯಲ್ಲಿದೆ. ಗುಲಬರ್ಗಾ ಮತ್ತು ಚಿತ್ತಾಪುರದ ಮಧ್ಯವಿದೆ. ಈಗ ಗುಂಡಗುರಕಿಯಲ್ಲಿ ಶಂಕರಶೆಟ್ಟಿಯ ವಂಶಸ್ಥರು ಇಲ್ಲವೆನಿಸುತ್ತದೆ. ಕ್ಷೇತ್ರಕಾರ್ಯ ಕೈಗೊಂಡಾಗ ಈ ಬಗ್ಗೆ ಯಾವ ಮಾಹಿತಿಯು ನಮಗೆ ದೊರೆಯಲಿಲ್ಲ.

ಬಸವಣ್ಣನಿಗೆ ಮದುವೆಯ ಸಂಭ್ರಮ ಕೇವಲ ಲೌಕಿಕದ ಒಂದು ಡೊಂಬರಾಟವೆನಿಸುತ್ತದೆ. ಸಂಬಂಧಿಕರೆಲ್ಲರೂ ವಿಜೃಂಭಣೆಯಿಂದ ಕೋರೂಟ ನೀರೆರೆಯುವ ಸಂಭ್ರಮ, ನಿಬ್ಬಣ ಹೋಗುವುದು ಹೀಗೆ ಎಲ್ಲ ಸಂಪ್ರದಾಯಗಳನ್ನು ಮಾಡುತ್ತಿದ್ದರೆ, ಇವೆಲ್ಲ ನನಗೆ ಸಂಬಂಧವಿಲ್ಲ ಎಂಬಂತೆ ಬಸವಣ್ಣ ವರ್ತಿಸುತ್ತಿದ್ದನು. ಶಿವನ ನೆನೆಯುತ್ತಾ ಇದೆಲ್ಲ ಭಕ್ತರಿಗೆ ಯಾಕೆ ಎಂದು ಪ್ರಶ್ನೆ ಹಾಕಿಕೊಳ್ಳುತ್ತಾನೆ.

‘‘ಸಾಕು ವಿಭೂತಿಯ ಪಟ್ಟ ಭಕ್ತರಿಗಿಂತೀ
ಲೋಕ ಬಳಕೆ ಯಾಕೆಯೆಂಬ |
ಕಾಕು ಮಾಡಿ ಕೆಡಿಸುತಲಿಹ ಮನೆಯೊಳು
ಲೋಕ ಪಾಲಿಪ ಬಸವೇಶ’’

ಶಿವಭಕ್ತರಿಗೆ ವಿಭೂತಿಯ ಪಟ್ಟ ಸಾಕು, ಹೀಗೆ ಲೋಕದ ಬಳಕೆ ಬೇಡ ಎನ್ನುವ ಅರ್ಥದಲ್ಲಿ ನೆರೆದೆಲ್ಲ ಜನರಿಗೆ ಹೇಳುತ್ತಾನೆ. ಬಸವಣ್ಣನ ಮದುವೆಯ ಸಂದರ್ಭದಲ್ಲಿ ಅವನ ತಾಯಿಯ ಹಿರಿಯ ಅಣ್ಣ ತೀರಿಕೊಂಡಿರುತ್ತಾನೆ. ಆಗ ಬಸವಣ್ಣ ಈ ಎಲ್ಲ ಸಂಭ್ರಮ ನನ್ನ ತಾಯಿಯ ಅಣ್ಣ ಸತ್ತುಹೋಗಿದ್ದಕ್ಕಾಗಿ ಎಂದು ನುಡಿಯುತ್ತಾನೆ. ಇದೆಲ್ಲ ಶಿವನ ಆಟ, ನನ್ನನ್ನು ಪಾಪಕ್ಕೆ ತಳುತ್ತಿದ್ದಾರೆ ಎಂದು ಬೊಬ್ಬೆ ಹೊಡೆಯುತ್ತಿದ್ದಾನೆ.

''ಹೊಡೆಯ ತೆಗೆಯುತಲಹರೆ ತಲೆಯನು ನನ್ನ
ಬಿಡರು ಪಾಪಕೆ ನೋಡಿಯೆಂಬ
ಮೃಡನಾಟವು ತನ್ನ ಒಡಲೊಳು ತುಂಬಿ ತಾ
ಹೊಡೆವುತಿಹನು ಬೊಬ್ಬೆಗಳನು''

''ಯಾರು ಕೇಳಿದರೆ ಹೇಳುತಲಿಹ ಹೆತ್ತಳ
ಹಿರಿಯಣ್ಣ ಸತ್ತನೆಂದೆನುತ |
ಆರಯ್ಯ ಹೋಗುತಲಿವೆ ನಾವು ಎನುತಲಿ
ಯಾರತಿಯನೆ ಹೇಳುತಿಹನು''[೧೦]

ಬಸವಣ್ಣನ ಈ ರೀತಿಯ ವರ್ತನೆಗಳು ಅವನು ವಿಷಯಸುಖದಿಂದ ದೂರವಿರುವುದನ್ನು ತಿಳಿಸುತ್ತದೆ. ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿಯ ಮೊದಲ ಪದ್ಯದಲ್ಲಿ ಹೇಳುವಂತೆ

''ಆರುನಾನೆಂದು ವಿಚಾರಿಸು ವಿಷಮ ಸಂ
ಸಾರವಿದನು ಕನಸೆಂದ''[೧೧]

ಮೊದಲಿಗೆ ನಾನು ಯಾರು? ಎಂಬುದನ್ನು ಅರಿತುಕೊಳ್ಳಬೇಕು. ಮಾನವ ಜನ್ಮದ ಸಾರ್ಥಕತೆಯನ್ನು ತಿಳಿಯಬೇಕು. ವಿಷಮವಾದ ಈ ಜಗತ್ತು ಕನಸೆಂದು ಅರಿಯಬೇಕು. ಎನ್ನುವ ರೀತಿಯಲ್ಲಿ ಬಸವಣ್ಣನು ಮದುವೆಯ ಸಂದರ್ಭದಲ್ಲಿ ನಡೆದುಕೊಳ್ಳುತ್ತಿದ್ದಾನೆ. ಬಸವಣ್ಣನು 'ಆರೂಢ' ಮಾದರಿಯ ಸಂತ ಎನ್ನುವುದಕ್ಕೆ ಇದೊಂದು ಸಾಕ್ಷಿಯಾಗಿದೆ. ''ಯೋ ವೈ ಭೂಮಾ ತತ್ ಸುಖಂ ನಾಲ್ಪೇ ಸುಖಮಸ್ತಿ'' (ವಿವೇಕಿಗಳಾದವರು ಎಂದೂ ವಿಷಯ ಸುಖಕ್ಕೆ ಆಸೆಪಡುವುದಿಲ್ಲ)[೧೨] ಎನ್ನುವ ಉಪನಿಷತ್ ವ್ಯಾಖ್ಯೆಯಂತೆ ಬಸವಣ್ಣನು ಅಲ್ಪ ಸುಖಕ್ಕಾಗಿ ಆಸೆಯನ್ನು ಮಾಡದವನಾಗಿದ್ದಾನೆ. ಆದ್ದರಿಂದಲೇ ಮದುವೆ ಸಂದರ್ಭವನ್ನು ತನ್ನ ತಾಯಿಯ ಅಣ್ಣ ಸತ್ತದ್ದಕ್ಕಾಗಿ ನಡೆಯುತ್ತಿರುವ ಕಾರ್ಯವೆಂದು ಹೇಳುತ್ತಾನೆ.

ಮಗನ ಈ ರೀತಿಯ ವರ್ತನೆಯನ್ನು ಕಂಡು ತಂದೆ ನಾಗಿಸೆಟ್ಟಿಯು ಇಂತಹ ಅಶುಭ ಮಾತುಗಳನ್ನಾಡದಿರು ಎಂದು ಸೆರಗೊಡ್ಡಿ ಬೇಡಿಕೊಳ್ಳುತ್ತಾನೆ. ತಂದೆಯ ಮಾತಿಗೆ ಬಸವಣ್ಣ ಸುಮ್ಮನಾಗುತ್ತಾನೆ. ನಂತರ ನಿಬ್ಬಣವು ಪ್ರೇಮದಿಂದ ಹೊರಡುತ್ತದೆ.

ಬಸವಣ್ಣನ ಮದುವೆಯ ಚಿತ್ರಣವಿರುವಂತೆಯೇ ಇಂದು ಹಳ್ಳಿಯಲ್ಲಿ ಮದುವೆಯ ಆಚರಣೆಗಳಿವೆ. ಸಂಪ್ರದಾಯ ಬದ್ಧವಾದ ಸಂಸ್ಕೃತಿಯ ಆಚರಣೆಯೊಂದಿಗೆ ಮದುವೆಯ ಕಾರ್ಯಗಳು ನೆರವೇರುತ್ತವೆ. ಇಲ್ಲಿ

ಬಸವಣ್ಣನ ಮದುವೆಗಿಂತ ಪೂರ್ವದಲ್ಲಿ ''ತಿಪ್ಪಣ್ಣಯ್ಯನ ಮದುವೆ ವಿವರಣೆ ಹೀಗೆ ಮೂಡಿಬಂದಿದೆ. ಗೌಲಿ, ಪರಡಿ, ಸರಳಿಗೆ, ಸೇವಗೆ, ಅಂಬ ಸಿದ್ಧಪಡಿಸಿದರು. ಹತ್ತೆಂಟು ಕೊಲ್ಲಾರಿ ಬಂಡಿಗಳು ಉರಗೆಜ್ಜೆ ಚವುರಿ ಕಟ್ಟಿದ ಎತ್ತುಗಳು ನಡೆದವು. ಏಳುಹಿಟ್ಟು, ಎಂಟುಹಿಟ್ಟು, ಸೆಟ್ಟಿಯರು ನ್ಯಾಯಕಾರರು, ಹದಿನೆಂಟು ಕುಲದವರು, ರುದ್ರವಾಣಿಜರು, ಕೈಲಾಸ ವಾಣಿಜರು ಕವಿ, ಗಮಕಿ, ವಾಗ್ಮಿ ಮದ್ದಳೆಯವರು ಸಾಗಿದರು. ಐರಾಣಿ, ಕೊಳಲು, ತಪ್ಪಟಿ, ಕಹಳೆ, ವಾದ್ಯಗಳು ಮೊಳಗುತ್ತಿದ್ದವು. ಅಕ್ಕಿ, ಕಣಕ, ಎಣ್ಣೆ, ತುಪ್ಪಗಳ ಸಿದ್ಧಿಕೆ, ಬುದ್ದಲಿಗಳು ಹಪ್ಪಳ, ಸೆಂಡಿಗೆ, ನೆಲ್ಲಿಯ ಚಟ್ನಿ, ಉಪ್ಪಿನಕಾಯಿ, ಉಪ್ಪು, ಎಳ್ಳೆಯಗಡ್ಡೆ, ಮೆಣಸು, ಹುಣಸೆಹಣ್ಣು ಸಹಿತ ಹೊರಟರು. ಅಡಿಕೆ ವಿಳ್ಯೆ ನೀಡುತ್ತ ಎಡ ಬಲಕೆ ಸತ್ತಿಗೆ ಕುದುರೆ ಮಂದಿ ನಡೆದರು. ಹೀಗೆ ಬೀಗರು ಎಲ್ಲ ರೀತಿಯಿಂದಲೂ ಉಂಡು ಉಟ್ಟು ಸುಖವಾಗಿದ್ದರು. ಮಾರನೆಯ ದಿನ ತಿಪ್ಪಸೆಟ್ಟಿಗೆ ಬಾಸಿಂಗ ಕಟ್ಟಿ ವೀಳ್ಯವನ್ನು ಕೊಟ್ಟರು. ಕುದುರೆಯಿಂದ ಇಳಿಸಿ ಶೆಟ್ಟಿಗಳೆಲ್ಲ ಸೇರಿ ಅವನನ್ನು ಕರೆದೊಯ್ದಿದ್ದರು. ಕನ್ನಿಕೆಗೆ ಚೊಕ್ಕ ಆಭರಣ ಇಟ್ಟರು. ಮುಹೂರ್ತ ಸಮೀಪಿಸಲು ಕನ್ನೆಯನ್ನು ಕರೆತಂದರು. ಹಸೆಯನ್ನು ರಚಿಸಿ ಹಂದರ ವೀಳ್ಯ ಜರುಗಿದವು. ನಾಗವಾಸವನ್ನು ಸಂತೈಯಿಸಿ ಎರಡು ದಿನ ನಿಂತು, ಉಡುಗೊರೆ ಪಡೆದು ಮರಳಿದರು. ಕನ್ಯೆಯನ್ನು ಮನೆತುಂಬಿಸಿಕೊಂಡರು.''

ತಿಪ್ಪಣ್ಣಯ್ಯ ಮತ್ತು ಬಸವಣ್ಣ ಇವರಿಬ್ಬರ ಮದುವೆಯ ಸಂಭ್ರಮವನ್ನು ನೋಡಿದಾಗ, ಅಂದಿನ ಸಾಮಾಜಿಕ ಪದ್ಧತಿಯಲ್ಲಿ ಎಲ್ಲ ಸಂಪ್ರದಾಯಗಳು ಶಿಸ್ತಿನಿಂದ ನಡೆಯುತ್ತಿದ್ದವೆಂದು ತಿಳಿಯಬಹುದು. ಎಂಟುಹಿಟ್ಟು, ಏಳುಹಿಟ್ಟು ಮನೆತನದವರು ಎಂದು ಕರೆದಿರುವುದು ಹಳ್ಳಿಯ ಆಯಗಾರರ ಪರ್ಯಾಯನಾಮವಾಗಿ ಕಾಣುತ್ತದೆ.

ಬಸವಣ್ಣನು ಮದುವೆಯು ಇಷ್ಟವಿಲ್ಲದಿದ್ದರೂ ಮದುವೆಯಾಗಿ ಮುಂದೆ ವ್ಯಾಪಾರವನ್ನು ಮಾಡಲೆಂದು ತೆರಳುತ್ತಾನೆ. ಆದರೆ ಅಲ್ಲಿ ನಡೆಯುವ ಮೋಸ ವಂಚನೆಯನ್ನು ನೋಡಿ ಸಹಿಸದಾಗುತ್ತಾನೆ. ''ಈ ವೃತ್ತಿಯಲ್ಲಿ ಪಾಪಕ್ಕೆ ಅವಕಾಶವಿದೆಯೆಂದು ತಿಳಿದು ಮಲ್ಲಿಕಾರ್ಜುನನ ಬೆಟ್ಟದತ್ತ ನಡೆದ, ಗಿರಿಗಹ್ವರ ಸುತ್ತಿದ ಕದಳಿಯನ್ನು ಪ್ರವೇಶಿಸಿದ'' ಎನ್ನುವ ವಿಚಾರಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಬಸವಣ್ಣ ಮದುವೆಯಾದರೂ ಸಹ ವಿರಕ್ತಿಯನ್ನು ಹೊಂದಿ ದೇಶಸಂಚಾರ ಮಾಡಿ ನಾಗಾವಿಗೆ ಬಂದು ಮಠ ಕಟ್ಟಿದ ಎಂದು ತಿಳಿದುಬರುತ್ತದೆ.

### ೪.೨ ಕಾರ್ಯಕ್ಷೇತ್ರ ಮತ್ತು ಪವಾಡಗಳು

''ಮದುವೆಯ ನಂತರ ಬಸವೇಶನು ಬಣಜಿಗ ವೃತ್ತಿಯನ್ನು ಮಾಡಲು ಹೋಗಿ, ಅಲ್ಲಿ ಪಾಪವಿದೆ ಎಂಬುದನ್ನು ಅರಿತು ಮಲ್ಲಿಕಾರ್ಜುನನ ಬೆಟ್ಟದತ್ತ ನಡೆದು, ಗಿರಿಗಹ್ವರ ಸುತ್ತಿದ, ಕದಳಿಯನ್ನು ಪ್ರವೇಶಿಸಿದ. ಅಲ್ಲಿ ತಪಸ್ಸು ಮಾಡುತಲಿದ್ದ ಮೂವರಲ್ಲಿ ಒಬ್ಬನು ಇವನ ವಿವರ ಕೇಳಿದ. ಎಲ್ಲರೂ ಈತನೊಂದಿಗೆ ಅಧ್ಯಾತ್ಮ ಚರ್ಚೆ ಮಾಡಿದರು. ಬಸವೇಶ ತಪೋನಿರತನಾದ. ಅವನಿಗೆ ಸ್ವಲ್ಪ ದಿನಗಳಲ್ಲಿಯೇ ಶಿವ ಸಾಕ್ಷಾತ್ಕಾರವಾಯಿತು. ತರುವಿಂದ್ಯಾ ತಪಸ್ಸು ಸಾಕು ನರವಿಂದ್ಯಾ ತಪಸ್ಸು ಮಾಡು ಎಂದು ಶಿವನ ಆದೇಶವಾಯಿತು. ಮೂರುಯುಗಗಳಲ್ಲಿ ಅರಣ್ಯ ತಪಸ್ಸು ಮಾಡಿದ, ಆದರೆ ಕಲಿಯುಗದಲ್ಲಿ ಇದು ಸಲ್ಲದು, ಧರ್ಮಬೋಧೆ ಮಾಡು ಎಂದು ಶಿವ ನಿರೂಪಿಸಿದ.'' ಮುಂದೆ ಶ್ರೀಶೈಲದಿಂದ ಬಸವೇಶನು ತನ್ನ ಗ್ರಾಮ ನಾಗಾವಿಗೆ ಮರಳುತ್ತಾನೆ.

ನಾಗಾವಿಗೆ ಶ್ರೀಶೈಲದಿಂದ ಬಂದ ನಂತರ, ಉಗ್ರಶಿಲೆಯ ಮೇಲೆ ತಪ್ಪಸ್ಸನ್ನು ಮಾಡುವುದು ಕ್ರೂರವಾದಂತಹ ಭಕ್ತಿಯನ್ನು ಮಾಡುತ್ತಿದ್ದನು. ಈ ಕ್ರೂರಭಕ್ತಿಯು ನಿನಗೆ ಸೂಕ್ತವಲ್ಲವೆಂದು ಶಿವನು ತಿಳಿ ಹೇಳಿ 'ಡಂಗೂರ ಬೋಧೆಯ ಸಾರು' ಎಂದು ಸೂಚಿಸಿದ.

ಹೇಳು ಮೊದಲುಗೊಂಡು ಡಂಗೂರ ಬೋಧೆಯ
ಹೇಳು ಎಂದೆಂಬ ನಿರೂಪಕೆ
ಚಾಳಿಸಿದನು ಹಿಡಿದಂತಹ ವ್ರತವ ತಾನು
ಭಾಳಲೋಚನ ನಾಟದಿಂದ.[೭೬]

ಹೀಗೆ ಡಂಗೂರ ಪದಗಳನ್ನು ಸಾರುತ್ತ ಕಾಲಜ್ಞಾನವನ್ನು ಪಡೆದು ಮುಂದೆ ಆಗುವಂತಹ ಭವಿಷ್ಯವನ್ನು ನುಡಿಯುತ್ತಿದ್ದನು.

''ಬಿಲ್ಲನೇರಿಸಿ ಅಂಬ ಹಿಡಕೊಂಡು ಊರೊಳು
ನಿಲ್ಲದೆ ಓಡ್ಯಾಡುತಿಹನು |
ಸೊಲ್ಲಿಲಾಡುವ ಕೇಡು ಬಂತು ತಾಪಕೆಯೆಂದು
ಎಲ್ಲರಾ(ಶ್ಚ)ರಿಯ ಮಾಡುವರು''

''ಊರ ಒಳಗೆ ಬಿಲ್ಲನೇರಿಸಿದಾತನು
ಊರ ಹೊರಗೆ ಬಿಲ್ಲನಿಳಸಿ |
ಊರಹೀನಡವಿ ಲೇಸೆಂಬ ಆಟವನಾಡೆ
ಯಾರಾದರಣಕವಾಡುವರು''

''ಅಣಕವಾಡಲಿಬೇಡ ಬಿಲ್ಲಕೋಲವರಿನ್ನು
ಎಣಿಕೆ ಇಲ್ಲದೆ ಎದ್ದು ಬಂದು
ಕಣುಕಸ ಉರಿಗೆ ಕೆಟ್ಟಂತೆ ಕೆಟ್ಟಿತು ಲೋಕ
ಅಣಕವಾಡುವರೇ ಕೇಳೆಂದ''[೭೭]

ಬಿಲ್ಲುಬಾಣವನ್ನು ಹಿಡಿದು ಊರಿನಲ್ಲಿ ಸಂಚರಿಸಿ ಎಲ್ಲರಿಗೂ ಆಶ್ಚರ್ಯವಾಗುವ ರೀತಿಯಲ್ಲಿ ಮುಂದೆ ಕೇಡಾಗುವ ವಿಚಾರವನ್ನು ತಿಳಿಸುವನು. ಊರಿನ ಒಳಗೆ ಬಿಲ್ಲನ್ನು ಏರಿಸಿದಾತ ಊರ ಹೊರಗೆ ಬಿಲ್ಲನ್ನು ಇಳಿಸಿ ಊರಿಗಿಂತ ಅಡವಿ ಲೇಸೆಂದು ಸಾರಿದನು. ಇವನ ಈ ವರ್ತನೆಯನ್ನು ನೋಡಿ ಜನರು ಅಣಕವಾಡಲು ಹೀಗೆ ಅಣಕವಾಡಬೇಡಿರಿ ಊರಿಗೆ ಕೆಟ್ಟದಾಗುತ್ತದೆ ಎನ್ನುತ ಬೀದಿಯಲ್ಲಿ ಚಿಟ್ಬೋರಿಗೆ ಎನ್ನುತ ಬೂದಿಯಲ್ಲಿ ಚೆಲ್ಲಾಟವನ್ನು ಆಡುತ್ತಾನೆ. ಹೀಗೆ ಆಟವಾಡಿದ ಎಂಟುದಿನಗಳಲ್ಲಿಯೇ ಊರು ಸುಟ್ಟು ಸೂರಾಡುತ್ತದೆ ಎಂಬ ಅಂಶಗಳನ್ನು ಈ ಕೆಳಗಿನ ಪದ್ಯದಲ್ಲಿ ಗಮನಿಸಬಹುದು.

ಕೆಟ್ಯಾಡುತಿಹರು ಊರೊಳಗೆಲ್ಲ ಹಲಬರು
ನಿಷ್ಠೆಯ ಕಾಣಲರಿಯದೆ,

ಚಿಟ್ಟೋರಿಗಾಟವಾಡಿದ ಅಷ್ಟದಿವದೊಳು
ಸುಟ್ಟು ಸೂರಾಡಿತೂರೆಲ್ಲ''

ಮುಂದೆ ಆಗುವಂತಹ ಕೇಡನ್ನು ಕುರಿತು ಮೊದಲೇ ತಿಳಿಯುವಂತಹ ದಿವ್ಯಜ್ಞಾನ ಬಸವಣ್ಣನಿಗಿದ್ದುದು ಅವನು ಸಾಮಾನ್ಯ ಪುರುಷನಲ್ಲ ಎನ್ನುವ ವಿಚಾರವನ್ನು ತಿಳಿಸುತ್ತದೆ. ಬಸವಣ್ಣನು ಕಾಲಜ್ಞಾನವನ್ನು ನುಡಿಯುವುದರ ಜೊತೆಗೆ ಅನೇಕ ಪವಾಡಗಳನ್ನು ಮಾಡುತ್ತಾನೆ. ಒಂದು ಸಾರಿ ಬಂಜೆಯೊಬ್ಬಳು ಕೊಡವನ್ನು ಹೊತ್ತು ಬರುತ್ತಿರುವಾಗ, ನನ್ನ ಮಗ ಬಸವಣ್ಣನು ಎಂದು ನುಡಿಯುತ್ತಾಳೆ. ಹಾಗೆ ಅನ್ನುತ್ತಿದ್ದಂತೆ ಅವಳ ಸ್ತನಗಳಲ್ಲಿ ಹಾಲು ಉನ್ನತವಾಗಿ ಸುರಿಯುತ್ತದೆ.

''ನನ್ನ ಮಗನು ಬಸವಣ್ಣನೆಂದೆನುತಲಿ
ರನ್ನೆ ಬಂದಳು ತಾನಾಡುತಲಿ
ತನ್ನ ಸ್ತನದಲಿ ಕ್ಷೀರವು ಧಾಜಿಗಟ್ಯಾಗ
ಉನ್ನತವಾಗಿ ಸುರಿವುತ''

''ಕೊಡನಿಳುಹಲು ಹೋದರು ನುಡಿಗೊಳ್ಳದೆ
ಕೊಡಗಿನಿಳಿಯದು ತಲೆಯಿಂದ
ನುಡಿಯಕೊಟ್ಟನು ಕೊಡನಿಳುಹೆಂದು ಬಸವಣ್ಣ
ಕೊಡನಿಳಿಯಿತು ನಿಮಿಷದಲಿ''[೨೦]

ತಲೆಯ ಮೇಲಿರುವ ಕೊಡವನ್ನು ಇಳುಹಲು ಹೋದರು ಕೊಡತಲೆಯಿಂದ ಇಳಿಯುವುದಿಲ್ಲ. ಆಗ ಬಸವಣ್ಣ ಕೊಡವನ್ನು ಇಳುಹು ಎಂದು ಅಪ್ಪಣೆಯನ್ನು ಕೊಡುತ್ತಾನೆ. ಕೊಡ ನಿಮಿಷದಲ್ಲಿಯೇ ಕೆಳಗೆ ಇಳಿಯುತ್ತದೆ. ಇವನಿಗೆ ಜನರೆಲ್ಲರು ಬಿತ್ತದೆ ಬೆಳೆಯುವಂತಹ ಬೊಮ್ಮಯ್ಯನೆಂದು ಲೋಕದ ಜನರೆಲ್ಲರು ಆಡಿಕೊಳ್ಳುತ್ತಿದ್ದರು.

ಬಸವಣ್ಣನು ಹೀಗೆ ಪವಾಡಗಳನ್ನು ಮಾಡುತ್ತ ಇರುವಂತ ಸಂದರ್ಭದಲ್ಲಿ, ಬೇಸರದಿಂದ ಒಂದು ಸಲ ಮಹೇಶ್ವರನ ಗುಡಿಯಲ್ಲಿ ವಾದ್ಯವನ್ನು ಬಾರಿಸುತ್ತಿರುವ ಸಂದರ್ಭದಲ್ಲಿ ಇಬ್ಬರು ಹಾದಿಹೋಕರು ಮದ್ದಳೆಯ ಶಬ್ದವನ್ನು ಕೇಳಿ ಅವನ್ಯಾರು ನೋಡೋಣ ನಡೆ ಎಂದು ನಿಂದೆಯ ನುಡಿಯನ್ನು ನುಡಿಯುತ್ತಾ ಹೋಗುತ್ತಾರೆ. ಆಗ ಬಸವಣ್ಣನನ್ನು ನೋಡಿ, ಬೆಲ್ಲ ಕೊಬ್ಬರಿಯನ್ನು ತಿಂದು ಕೊಬ್ಬಿರುವ ಈ ಬಣಜಿಗ ಕುಣಿದಾಡುತಿಹನೆ ಎಂದು ಬಯ್ಯುತ್ತಾರೆ. ಹೀಗೆ ಬಯ್ದವನಿಗೆ ಹೊಡೆದ ಹಾಗೆ ಆಗಿ ಅಲ್ಲಿಯೇ ಬಿದ್ದು ಬಿಡುತ್ತಾನೆ. ಸತ್ತುಹೋದನೆಂದು ಎಲ್ಲರೂ ಅಂದುಕೊಳ್ಳುತ್ತಾರೆ. ಆಗ ಬಸವಣ್ಣ ಮತ್ತೆ ಮೇಲೇಳು ಹಿಂದಕೆ ಓಡು ಎಂದು ನುಡಿಯುತ್ತಾನೆ. ಅಂತೆಯೇ ಸತ್ತವ್ಯಕ್ತಿ ಅನಂತರ ತಿರುಗಿ ಬಂದು ಬಸವಣ್ಣನಿಗೆ ಅಡ್ಡಬೀಳುತ್ತಾನೆ.

''ತಿರುಗಿಬಂದನು ಮೋರೆ ಹಿಡಿದು ಅಬ್ಬರಿಸುತ
ಹರ ಬಸವೇಶನಿದ್ದೆಡೆಗೆ
ಅರಿಯದೇ ನಿಂದ್ಯ ಮಾಡಿದ ತಪ್ಪ ಕಳೆಯೆಂದು
ಕರವ ಮುಗಿದು ಅಡ್ಡಬಿದ್ದ''[೨೧]

''ಬಸವಣ್ಣ ತಪ್ಪು ಮಾಡಿದವರಿಗೆ ಶಿಕ್ಷೆಯನ್ನು ನೀಡುತ್ತಾ ಅವರಿಗೆ ತಪ್ಪಿನ ಅರಿವು ಆದ ಮೇಲೆ ಅವರನ್ನು ಮನ್ನಿಸುವ ಗುಣವನ್ನು ಹೊಂದಿದವನಾಗಿದ್ದಾನೆ. ಒಂದು ಸಾರಿ ಬಸವಣ್ಣ ಒಬ್ಬ ಭಕ್ತನ ಮನೆಯಲಿ ಹೋಗಿ ಕುಳಿತುಕೊಂಡಿರುತ್ತಾನೆ. ಆಗ ಮತ್ತೊಬ್ಬ ಅವನನ್ನು ನಿಂದನೆ ಮಾಡುತ್ತಾನೆ. ನಿಂದನೆ ಮಾಡಿದವನಿಗೆ ಹೇಗೆ ಕುಳಿತಿರುವೆಯೋ ಹಾಗೆ ಬಿದ್ದು ಹೋಗು ಎಂದು ನುಡಿಯುತ್ತಾನೆ. ಬಸವಣ್ಣ ಒಮ್ಮೆ ನುಡಿದನೆಂದರೆ ಆಗಿಯೇ ಹೋಯಿತು. ಆಗ ನಿಂದನೆ ಮಾಡಿದವನ ಹೆಂಡತಿ ಬಂದು ನಡೆದ ವಿಷಯವನ್ನು ಬಸವಣ್ಣನಿಗೆ ತಿಳಿಸುತ್ತಾಳೆ. ಬಸವಣ್ಣ ಅವನನ್ನು ಕರೆತರಲು ಹೇಳುತ್ತಾನೆ. ಜ್ಞಾನವಿಲ್ಲದೆ ಆಡಿದ ಮಾತಿಗೆ ಈ ರೀತಿಯ ಶಿಕ್ಷೆಯಾಯಿತು ಎಂದು ಹೇಳಿ ಅವನನ್ನು ಪುನಃ ಎಚ್ಚರವಾಗುವಂತೆ ಮಾಡಿ ಕಳಿಸುತ್ತಾನೆ''[೨೨] ಬಸವಣ್ಣನು ಹೋಗು ಎನಲು ಜಡವಾಗಿರುವಂತಹ ದೇಹ ಚೈತನ್ಯರೂಪವನ್ನು ಹೊಂದಿ ನಿಂದಕನು ಬಸವಣ್ಣನಿಗೆ ವಂದಿಸಿ ನೀನು ಶಿವಯೋಗಿ ಎಂದು ಹೇಳಿ ಹೋಗುತ್ತಾನೆ.

ಒಂದು ದಿವಸ ಬಸವಣ್ಣ ಶಿವನಾಟ ಮಾಡುತ್ತ ಒಂದೊಂದು ವೇಷದಲ್ಲಿ ಮಗ್ನನಾಗಿರುತ್ತಾನೆ. ಮಂದಮತಿಯ ವ್ಯಕ್ತಿ ತನ್ನ ಪಾದ ತೊಳೆ ನೀರನ್ನು ಬಸವಣ್ಣನಿಗೆ ತಾಗಿಸುತ್ತಾನೆ. ಮೋರಿಯ ನೀರು ಬೀಳಿಸಿದಾತ ನಾಗರಹಾವು ಕಚ್ಚಿ ಸಾವಿಗಿಡಾಗುತ್ತಾನೆ. ಪುಣ್ಯ ಪುರುಷನಿಗೆ ಅಪಚಾರವೆಸಗಿದವನಿಗೆ ಪಾಪವು ತಪ್ಪಿದ್ದಲ್ಲ ಎನ್ನುವುದಕ್ಕೆ ಇದು ನಿದರ್ಶನವೆನಿಸಿತು.

ಬಸವಣ್ಣನು ಪವಾಡಗಳನ್ನು ಮಾಡುತ್ತಾ ಎಲ್ಲ ಕಡೆಯಲ್ಲಿಯೂ ಅವನ ಹೆಸರು ಕೇಳಿಬರುತ್ತದೆ. ಬಸವನ ಪವಾಡಗಳು ಊರಿನ ಅಧಿಕಾರಿಗೆ ಹುಚ್ಚು ತನದ ಕೆಲಸವೆಂದು ಕಂಡುಬರುತ್ತವೆ. ಒಂದು ಸಾರಿ ಊರಿನ ಅಧಿಕಾರಿ ಬಸವಣ್ಣನ ಮರುಳುತನವ ಬಿಡಿಸುವೆನೆಂದು ಹೇಳಿ ಬಡಿಗೆಯನ್ನು ತರಿಸುತ್ತಾನೆ. ಬಸವಣ್ಣನಿಗೆ ಮರುಳತನವ ಬಿಡು ಇಲ್ಲದಿದ್ದರೆ ನೋವು ಬರುವಂತೆ ಶಿಕ್ಷೆಯನ್ನು ನೀಡುತ್ತೇನೆ ಎಂದು ನುಡಿಯುತ್ತಾನೆ. ಇದಕ್ಕೆ ಬಸವಣ್ಣನು ನೀಡುವಂತ ಉತ್ತರ ಮೇರುಮಟ್ಟದ್ದಾಗಿದೆ. ಇದು ಶಿವನ ಇಚ್ಛೆ. ಅವನು ನಡೆಸಿದಂತೆ ನಾನು ನಡೆಯುತ್ತೇನೆ ಎಂದು ನುಡಿಯುತ್ತಾನೆ. ಅಲ್ಲಿಯೇ ಇದ್ದ ಆಳನ್ನು ಕರೆದು ಗಾಣದವರನ್ನು ಕುರಿತು ಈ ರೀತಿ ನುಡಿಯುತ್ತಾನೆ.

''ಕೇಳು ಮರುಳತನ ಬಿಡೆ ನನ್ನಿಚ್ಚೆಗಳಲ್ಲ
ಭಾಳಲೋಚನ ಇಚ್ಛೆಯಿಂದ
ಆಳ ನಿಮ್ಮಯ ತಾಯ ಮೊಲೆಯ ಕೊಯ್ವಾನೆಯೆ
ಹೇಳು ಕೊಯ್ಯರಬೇಕೊ ಬೇಡ''[೨೩]

ಬಸವಣ್ಣನ ಈ ರೀತಿಯ ಮಾತಿನಿಂದ ಎಲ್ಲರೂ ತಬ್ಬಿಬ್ಬಾಗುತ್ತಾರೆ. ಒಡೆಯ ಹೇಳಿದಂತೆ ಕೇಳುವುದು ಧರ್ಮ ಎಂದು ಎಲ್ಲರೂ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಅದೇ ರೀತಿ ಶಿವನ ಆಜ್ಞೆಯಾಗಿದೆ. ನಾನು ಹಾಗೆ ಇರುವೆನೆಂದು ಹೇಳುತ್ತಾನೆ. ಆದರೂ ಸಹ ಬಸವಣ್ಣನ ಮಾತನ್ನು ಯಾರೂ ಕೇಳುವುದಿಲ್ಲ. ಊರ ಅಧಿಕಾರಿಯ ಆಜ್ಞೆಯ ಮೇರೆಗೆ ಇಬ್ಬರು ಬಸವಣ್ಣನನ್ನು ಹೊಡೆಯಲು ಕೈ ಮೇಲೆತ್ತುತ್ತಾರೆ. ಅವರ ಕೈಗಳು ಎತ್ತಿದವು ಕೆಳಗೆ ಇಳೆಯಲೇ ಇಲ್ಲ. ಆಗ ಬಸವಣ್ಣನನ್ನು ವಂದಿಸಿ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾರೆ. ನಂತರ ಕೈಗಳು ಕೆಳಗೆ ಇಳಿಯುತ್ತವೆ.

ಶಿವನ ಒಂದೊಂದು ಆಟದಿಂದ ಪವಾಡಗಳನ್ನು ಮಾಡುತ್ತ ಊರ ಹೊರಗೆ ಒಂದು ಜಾಗೆಯನ್ನು ಗೊತ್ತುಮಾಡಿಕೊಂಡು ಜೇಡಸಿಂಪಿಗೆ ಎನ್ನುವಂತಹ ಕುಲವನ್ನು ಮಾಡದೆ ಎಲ್ಲ ಕುಲದವರೊಂದಿಗೆ ಹೊಂದಿಕೊಂಡು ಅವರು ತಂದ ಊಟವನ್ನು ಮಾಡುತ್ತಿದ್ದನು. ಬಸವಣ್ಣನ ತಂದೆ ತಾಯಿಗಳು ಈ ವಿಷಯವನ್ನು ತಿಳಿದು ತಮ್ಮ ಮಗ ಹೀಗೇಕೆ ಮಾಡುತ್ತಾ ಇದ್ದಾನೆ ನಮ್ಮ ಹೊಟ್ಟೆಯಲಿ ಹುಟ್ಟಿ ಅನ್ಯ ಕುಲದ ಜನಗಳೊಂದಿಗೆ ಬೆರೆತು ನಮ್ಮನ್ನು ಕೊಟ್ಟಿ ಮಾಡಿದಿ ಎಂದು ನುಡಿಯುತ್ತಾರೆ. ಬಸವಣ್ಣನು ಭಕ್ತರಾದರೆ ಸಾಕು ಮತ್ತೇಕೆ ಕುಲ ಎಂದು ಹೇಳುತ್ತಾನೆ. ಶಿವನ ಆರಾಧನೆಯನ್ನು ಮಾಡುವವರಿಗೆ ಕುಲ ಒಂದೇ ಎಂದು ನುಡಿಯುತ್ತಾನೆ.

ಬಸವಣ್ಣ ಕುಲಜನರನ್ನು ಕುರಿತು ಆಡುವ ಮಾತುಗಳು ನಿಜಕ್ಕೂ ಘನತೆಯನ್ನು ಹೊಂದಿದವುಗಳಾಗಿವೆ.

''ಏನು ಕ್ರಮವು ಅವರದು ಹೀನಕುಲ ಮತ್ತೆ
ಏನು ಕ್ರಮವು ಶ್ರೇಷ್ಠ ನೀವು |
ಜ್ಞಾನವಿಲ್ಲದೆ ನುಡಿವುತಲಿದ್ದಿರೆನುತಲಿ
ತಾನು ನುಡಿದ ಬಸವೇಶ''

''ಕ್ಷೀರ ಸುರಿವುದೇ ಕುಲಜರ ಅಂಗದಲೇನು
ಯಾರು ಅಕ್ಕುಲಜನರಂಗದಲಿ
ಬೇರೆ ರುಧಿರವು ಸುರಿವುದೇ ಎನುತಲಿ
ತೋರಿಯಾಡಿದ ಬಸವೇಶ''[೨೪]

ಇಲ್ಲಿ ಕುಲಜರು ಎನ್ನುವಂತದ್ದು ಇಲ್ಲ. ಶಿವನನ್ನು ಭಕ್ತಿಪೂರ್ವಕವಾಗಿ ಆರಾಧನೆಯನ್ನು ಮಾಡುವಂತವರೆಲ್ಲರೂ ಶ್ರೇಷ್ಠರೆ ಎಂದು ನುಡಿಯುತ್ತಾನೆ. ಕುಲಜನರೆಂದರೆ ಅವರ ದೇಹದಲ್ಲೇನು ಹಾಲು ಸುರಿಯುವುದೇ? ಕೀಳುಕುಲದವರ ದೇಹದಲ್ಲೇನಾದರೂ ರಕ್ತ ಸುರಿಯುವುದೇ ಎನ್ನುವ ಪ್ರಶ್ನೆಗಳನ್ನು ತಂದೆತಾಯಿಗಳಿಗೆ ಹಾಕುತ್ತಾನೆ. ಮೂರು ಜಗಕ್ಕೆ ದೇವನೊಬ್ಬನೇ ಎಂದು ಸಾರುತ್ತಾನೆ. ಸರ್ವಜನರಿಗೂ ಒಂದೇ ಭೂಮಿ, ಜಲ, ಅಗ್ನಿ, ವಾಯು, ಆಕಾಶ ಈ ಪಂಚಕಗಳೆಲ್ಲವೂ ಒಂದೇ. ಸೂರ್ಯ, ಚಂದ್ರ ಗೋಕ್ಷೀರ ಎಲ್ಲ ಜನರಿಗೂ ಒಂದೆಯಾಗಿರುವಾಗ, ಇವೆಲ್ಲವನ್ನು ಬೇರೆ ಮಾಡಿ ಕೊಡಿ, ಹಾಗಾದರೆ ಕುಲಜರೆಂದು ಕರೆಯುತ್ತೇನೆ ಎಂದು ಹೇಳುತ್ತಾನೆ.

ಭೂಮಿಯಲ್ಲಿ ಎಲ್ಲವೂ ಒಂದೇ ಎನ್ನುವುದಕ್ಕೆ ಬಸವಣ್ಣ ಅನೇಕ ಮಾತುಗಳನ್ನಾಡುತ್ತಾನೆ.

''ಮಾತಾಪಿತರ ಕೂಟದುತ್ಪತ್ತಿ ತೆರನೊಂದೆ
ಧಾತ ಸಪ್ತಕವದು ಒಂದೆ
ಭೂತ ಪಂಚಕ ಒಂದೇ ಸುಖ ದುಃಖ ಕ್ರಮವೊಂದೇ
ಸ್ಥಿತಿಲಯಗಳ ಭೇದವೊಂದೆ''

''ಭವ ಬಂಧನಗಳೊಂದೆ ಜೀವಕಾಯಗಳೊಂದೆ
ಶಿವನಿರ್ಮಿತದ ಕಲ್ಪನೆಯೊಂದೆ

ಇವರ ಭೇದವನರಿಯದ ನುಡಿವರ ಮುಂದೆ

ಶಿವನು ಮೆಚ್ಚನು ಎಂದ ಶರಣ''[೩೭]

ಹೀಗೆ ಸೃಷ್ಟಿಯಲಿ ಮೇಲು ಕೀಳೆಂಬುದಿಲ್ಲ, ಎಲ್ಲರೂ ಒಂದೇ, ಎಲ್ಲರ ಜೀವನ ಕ್ರಮ ಒಂದೆ, ಎಲ್ಲರ ಜೀವ ಉತ್ಪತ್ತಿ ಒಂದೇ, ಭವ ಬಂಧನಗಳೊಂದೆ, ಜೀವಕಾಯಗಳೊಂದೇ, ಶಿವನು ನಿರ್ಮಿಸಿರುವ ಕಲ್ಪಿತ ಜಗತ್ತು ಒಂದೇ, ಹೊಲಸುಗೊಂಡಿರುವ ಇಂದ್ರಿಯಗಳಿಂದ ನೆಲೆಗೊಂಡಿರುವಂತ ದೇಹ ಒಂದೇ ಎಂದು ಹೇಳುತ್ತಾ ಕುಲದ ಬೇರನ್ನು ಎತ್ತಿ ತೋರುತ್ತಾನೆ.

''ಬಸವಣ್ಣನ ದೃಷ್ಟಿಯಲ್ಲಿ ಕುಲಜರೆಂದರೆ ಮಂತ್ರಪಿಂಡಗಳು. ಕುಲಹೀನರೆಂದರೆ ಮಾಂಸಪಿಂಡಗಳು. ಎನ್ನುವಂತಹ ಮಾರ್ಮಿಕವಾದ ನುಡಿಗಳನ್ನು ಹೇಳುತ್ತಾನೆ. ಮೊದಲಿಗೆ ಮಂತ್ರಪಿಂಡದ ಕುಲಜರ ಲಕ್ಷಣಗಳನ್ನು ಹೇಳುತ್ತಾನೆ. ಯಾರು ಸತ್ಯ, ಧರ್ಮದ ಹಾದಿಯ ತಪ್ಪದೇ ಧೀರಭಕ್ತಿಯಲಿ ಶಿವನನ್ನು ಒಲಿಸಿಕೊಳ್ಳುವರೋ ಭೂಮಿಯಲ್ಲಿ ಅವರು ಮಂತ್ರಪಿಂಡಗಳು''[೩೮] ಇನ್ನು ಮಾಂಸಪಿಂಡದ ಕುಲಹೀನನ ಲಕ್ಷಣವನ್ನು ಈ ರೀತಿ ತಿಳಿಸುತ್ತಾನೆ.

''ಕುಂದ ಭಕ್ತಿಯ ಭಾವ ಕಳವು ಹಾದರ ಹುಸಿ

ಯಿಂದ ಎಂಬತ್ತು ನಾಲ್ಕು ಲಕ್ಷ

ದಂದುಗ ಯೋನಿಯಲಿ ಹೊಂದಿ ಬರುತಲಿಹ

ಅಂದಕನಲಿ ಮಾಂಸಪಿಂಡ''[೩೯]

ಭಾವನೆಯು ಕುಂದು ಸ್ವಭಾವದಾಗಿದ್ದು, ಕಳವು, ಹಾದರ, ಸುಳ್ಳುನುಡಿವುದನ್ನು ಮಾಡುತ್ತಾ ಎಂಬತ್ನಾಲ್ಕು ಲಕ್ಷ ಯೋನಿಯಲಿ ತಿರುಗಿ ಬರುವವನೆ ಮಾಂಸಪಿಂಡ ಎಂದು ಹೇಳುತ್ತಾನೆ. ಬಸವಣ್ಣ ತಂದೆ-ತಾಯಿಗಳಿಗೆ ಈ ರೀತಿ ಉಪದೇಶವನ್ನು ಮಾಡುತ್ತಿರುವಾಗ ನೀನು ನಮ್ಮ ಮಗನಾಗಿ ಈ ರೀತಿ ಮಾತನಾಡುವುದು ಸರಿಯಲ್ಲವೆಂದು ತಂದೆ ನುಡಿದಾಗ, ನಾನು ನಿಮ್ಮ ಮಗನಲ್ಲ ಎಂದು ನುಡಿಯುತ್ತಾನೆ. ಹಾಗಾದರೆ ನೀನ್ಯಾರ ಮಗ ಎಂದು ನುಡಿದಾಗ ನಾನು ಶಿವನ ಪುತ್ರನೆಂದು ನುಡಿಯುತ್ತಾನೆ. ನಾನು ನಿಮ್ಮ ಹೊಟ್ಟೆಯಲ್ಲಿ ಏಕೆ ಹುಟ್ಟಿದೆ ಎಂಬುದನ್ನು ಈ ರೀತಿ ತಿಳಿಸುತ್ತಾನೆ.

''ನಿಷ್ಠೆಭಕ್ತನು ತಟ್ಟನಾಡಿದ ಶಬ್ದಕೆ

ಹುಟ್ಟಿದೆ ನಿಮ್ಮ ಹೊಟ್ಟೆಯಲಿ

ಬಿಟ್ಟು ಹೋಹದೆ ಮಗನಲ್ಲವೆಂದೆಂದರೆ

ಕೆಟ್ಟವು ಮಾತೆಂದರವರು''[೪೦]

ಇಲ್ಲಿ ನಿಷ್ಠಭಕ್ತನು ತಟ್ಟನಾಡಿದ ಶಬ್ದಕೆ ಎಂದರೆ ಹಿಂದೆ ತಿಪ್ಪಣ್ಣಯ್ಯನು ''ಶಿವನ ಒಂದು ಮುಖ ಇಲ್ಲಿ ಅವತರಿಸಲಿದೆ'' ಎಂದು ಹೇಳಿದ ಮಾತಿಗೆ ನಾನು ನಿಮ್ಮ ಉದರದಲ್ಲಿ ಹುಟ್ಟಿ ಬಂದಿದ್ದೇನೆ ಎಂದು ನುಡಿಯುತ್ತಾನೆ. ತಂದೆ ತಾಯಿಗಳು ನೀನು ಮಾತಾಪಿತರ ಕೂಟವಿಲ್ಲದಿದ್ದರೆ ಹೇಗೆ ಉತ್ಪತ್ತಿಯಾಗುತ್ತಿದ್ದೆ ಎಂದು ಕೇಳುತ್ತಾರೆ. ಅದಕ್ಕೆ ಬಸವಣ್ಣನು ಬಂಜೆಯರಿಗೆ ಕೂಟವಿದ್ದರೂ ಮಕ್ಕಳೇಕೆ ಆಗುವದಿಲ್ಲ ಎಂದು ಕೇಳುತ್ತಾನೆ. ಶಿವನ ಒಲುಮೆ

ಇಲ್ಲದೆ ಯಾವ ಕೆಲಸವು ಆಗದು ಎಂದು ಜೀವ ಉತ್ಪತ್ತಿಯ ಶೈಲಿಯನ್ನು ವಿವರಿಸಿ ಹೇಳುತ್ತಾನೆ. ಕೊನೆಗೆ ತಂದೆತಾಯಿಗಳು ನಾವು ಏನನ್ನು ಮಾತನಾಡೆವು ನಮಗೆ ಏನೂ ತಿಳಿದಿಲ್ಲ ಎಲ್ಲವನ್ನು ನೀನೇ ಬಲ್ಲೆ ಎಂದು ಮೌನದಿಂದ ಶರಣೆಂದು ಹೋಗುತ್ತಾರೆ. ಆಗ ಬಸವಣ್ಣ ಅವರನ್ನು ಕರೆದು ಮಗ ಎನ್ನುವಂತಹ ಜಡ ಭಾವವನ್ನು ಬಿಡಿ ಎಂದು ಹೇಳಲು, ನೀನು ಶಿವನ ಮಗ ಎಂದು ಹೇಳಿ ಹೊರಟು ಹೋಗುತ್ತಾರೆ.

ಬಸವಣ್ಣ ತಂದೆ ತಾಯಿಯನ್ನು ಮರಳಿ ಕಳಿಸಿ ತನ್ನತನವನ್ನು ಉಳಿಸಿಕೊಂಡ. ಹಾಗಾಗಿ ಅವನಿಗೆ ಏಕವಾಕ್ಯ ಪ್ರತಿಷ್ಠಾಚಾರ್ಯನೆಂಬ ಬಿರುದು ಸಲ್ಲುತ್ತದೆ. ಲೋಕದ ಆರು ದರ್ಶನಕೆ ದೀಕ್ಷೆಯನ್ನು ನೀಡಲು ಕರ್ತ ಬಂದನೆಂದು ಎಲ್ಲರೂ ಜಯಘೋಷ ಮಾಡುತ್ತಾರೆ. ಬಸವಣ್ಣನು ನುಡಿದಂತೆ ನಡೆದಿದ್ದರಿಂದ ಅವನ ಕೀರ್ತಿ ಎಲ್ಲೆಡೆ ಹರಡಿದೆ. ಒಬ್ಬ ಶರಣ ಲೋಕವನ್ನು ತಿದ್ದಲು ಕೇವಲ ಉದ್ದೇಶ ಮಾಡಿದರೆ ಸಾಲದು, ಹೀಗೆ ನುಡಿದಂತೆ ನಡೆಯುವುದನ್ನು ಕಲಿಯಬೇಕೆಂದು ತೋರಿಸಿಕೊಟ್ಟವನು ಬಸವಣ್ಣ.

### ೪.೩ ಧರ್ಮಕಲ್ಯಾಣ ಸ್ಥಾಪನೆ ಮತ್ತು ಬೋಧನೆ

ಬಸವಣ್ಣನು ಊರಹೊರಗೆ ವಾಸಮಾಡುತ್ತ ಪವಾಡಗಳನ್ನು ಮಾಡುತ್ತ ಶಿವನ ಲೀಲೆಯನ್ನು ಸಾರುತ್ತಿದ್ದನು. ದಿನ ಕಳೆಯುತ್ತಿದ್ದಂತೆ ಊರಹೊರಗೆ ಒಂದು ಮಠವನ್ನು ಕಟ್ಟಿದನು. ಅದನ್ನು ಸೃಷ್ಟಿಗೆ ಮೂಲ ಎಂದು ತಿಳಿದು ಅದಕ್ಕೆ ಧರ್ಮಕಲ್ಯಾಣ ಎಂದು ಹೆಸರಿಟ್ಟನು.

''ಕಟ್ಟಿದನು ಊರ ಹೊರಗೆ ಮಠವನು ತಾನು
ಇಟ್ಟನು ಅದಕೆ ನಾಮವನೂ
ಸೃಷ್ಟಿಗೆ ಧರ್ಮಕಲ್ಯಾಣವೆಂದೆನಿಸಿದ
ನಿಷ್ಠೆಗೆ ಮೂಲ ಪೀಠವನು''[೨೯]

ಮಠವನ್ನು ಕಟ್ಟಿ ಅದಕ್ಕೆ ಧರ್ಮಕಲ್ಯಾಣವೆಂದು ಹೆಸರಿಟ್ಟಿರುವುದರಿಂದ ತಿಳಿದುಬರುವ ಪ್ರಮುಖ ಅಂಶವೆಂದರೆ, ಸರ್ವಧರ್ಮೀಯರನ್ನು ಅವನು ಗೌರವಿಸುತ್ತಿದ್ದು 'ಆರೂಢ' ಮಾರ್ಗ ಅವನದಾಗಿತ್ತೆಂದು ತಿಳಿಯುತ್ತದೆ. ಬಸವಣ್ಣನು ಅಲೌಕಿಕ ವ್ಯಕ್ತಿಯಾಗಿ ಈಗ ಜೀವನವನ್ನು ನಡೆಸುತ್ತಿರುವ ಸಮಯದಲ್ಲಿ ಅವನಿಗೆ ಈಗಿನ ಬಸವಣ್ಣ ಎನ್ನುವ ಹೆಸರು ಬೇಡವೆನಿಸುತ್ತದೆ. ಪೂರ್ವದ ಹೆಸರು ಅಂದರೆ ಅವನಿಗೆ ಶಿವಲೋಕದಲ್ಲಿ ಕರೆಯುತ್ತಿದ್ದ ಹೆಸರಾದ 'ಗುಂಡ' ಎನ್ನುವ ಹೆಸರನ್ನು ಕರೆಯಿರಿ ಎಂದು ಹೇಳುತ್ತಾನೆ. ಇದಕ್ಕೆ ತಿಪ್ಪಣ್ಣಯ್ಯನು ನಿಮ್ಮ ಹಿಂದಿನ ಹೆಸರು 'ಗುಂಡಯ್ಯ' ಇಂದಿನ ಹೆಸರು 'ಬಸವಣ್ಣ' ಆದ್ದರಿಂದ ಎರಡನ್ನು ಸೇರಿಸಿ ''ಗುಂಡಬಸವಯ್ಯ'' ಎಂದು ಕರೆಯುವುದಾಗಿ ತಿಳಿಸುತ್ತಾನೆ. ಬಸವಣ್ಣನು ಅದಕ್ಕೆ ಒಪ್ಪಿಗೆಯನ್ನು ನೀಡಿ ಹಾಗೇ ಆಗಲಿ ಎಂದು ನುಡಿಯುತ್ತಾನೆ. ಈಗ ಎಲ್ಲರೂ ''ಗುಂಡಬಸವಣ್ಣ'' ಎಂದೂ ಗುರುಗುಂಡಬಸವನೆಂದು ಕರೆಯುತ್ತಾರೆ. ಹೀಗೆ ಬಸವಣ್ಣ ಗುಂಡಬಸವಣ್ಣನೆಂಬ ನಾಮವನ್ನು ತಾಳಿ ಧರ್ಮಕಲ್ಯಾಣದಲ್ಲಿ ನೆಲೆ ನಿಂತನು.

''ಹಿಂದಣ ನಾಮ ಗುಂಡಯ್ಯನೆಂಬುದು ನಮ
ಗಿಂದು ಕರೆ ಅದರಲೆಂದೆನಲು

ಒಂದು ಬಿನ್ನಹ ಕೇಳಿ ಎಂದು ಎನುತ ಶರ
ಣೆಂದು ನುಡಿದ ತಿಪ್ಪಣ್ಣಯ್ಯ''[೬೦]

ಧರ್ಮಕಲ್ಯಾಣವನ್ನು ಸ್ಥಾಪಿಸಿಯಾದ ಮೇಲೆ ದೇವರ ಆಚಾರಕ್ಕೆ ನಿಷ್ಠೆಯಿಂದ ನಿಲ್ಲುವವರನ್ನು ನೇಮಿಸುತ್ತಾನೆ. ದೇವರ ಆಚಾರಕ್ಕೆ ನಿಲ್ಲುವರು ಮುಂದೆ ಬನ್ನಿರಿ ಎಂದು ನೆರೆದ ಜನರಲ್ಲಿ ಕೇಳುತ್ತಾನೆ. ಆಗ ಒಬ್ಬಿಬ್ಬರು ಮುಂದೆ ಬರುತ್ತಾರೆ. ಹೀಗೆ ಮುಂದೆ ಬಂದವರಿಗೆ ಬೋಳರೆಂದು ಹೆಸರಿಡುತ್ತಾನೆ. ಬೋಳರಿಗೆ ದೀಕ್ಷಾವಿಧಿಯನ್ನು ನೆರವೇರಿಸುತ್ತಾರೆ. ಪ್ರಾರಂಭದಲ್ಲಿ ಅವರಿಗೆ ಕಟ್ಟುನಿಟ್ಟಾದ ಕ್ರಮಗಳನ್ನು ಅನುಸರಿಸುವಂತೆ ಈ ರೀತಿಯಾಗಿ ಆದೇಶ ಮಾಡುತ್ತಾರೆ.

''ತನ್ನಿ ಕರಿಯ ಮಣಿಯೋಲೆಯ ತೋಡನು
ಪಣ್ಯ ಸ್ತ್ರೀಯರಲ್ಲಿಗೆ ಹೋಗಿ
ಅನ್ನಕ ದೃಢವಿಲ್ಲವೆಂದು ಎನುತಲಿ ಪ್ರ
ಸನ್ನಮೂರುತಿ ಪರಿಸಿದನು''

''ಕಟ್ಟನಿಂತರು ಕಂಕಣವನು ಮುಂಗೈಯಲಿ
ನಿಷ್ಠೆಯಿಂದಲಿ ಶಿವಪತಕೆ
ಕೆಟ್ಟತನದಲ್ಯಾರು ಅರಿತು ಕೆಡಿಸಿದರು
ನಷ್ಟವಾಗಲಿ ಬೇಕು ಎನುತ''[೬೧]

ಹೀಗೆ ಬೋಳೆಯರಿಗೆ ನಿಮ್ಮ ಪುಣ್ಯ ಸ್ತ್ರೀಯರಲ್ಲಿಗೆ ಹೋಗಿ ಕರಿಮಣಿ, ಬಳೆ ಪಡೆದುಕೊಂಡು ಬನ್ನಿರಿ ಎನಲು ಅವರು ಹಾಗೆಯೇ ಮಾಡುತ್ತಾರೆ. ನಂತರ ಅವರಿಗೆ ದೀಕ್ಷಾರೂಪವಾಗಿ ಮುಂಗೈಗೆ ಕಂಕಣ ಕಟ್ಟಲಾಯಿತು. ನಂತರ ಊರಿಗೆ ತಿಳಿಯುವ ಹಾಗೆ, ತೊಗಲ ಜಾಗಟೆ, ಎಲುವಿನ ಕೋಲಿನಿಂದ ಡಂಗೂರ ಹೊಯಿಸಿದನು. ಇದೆಲ್ಲವೂ ಆದ ಮೇಲೆ ಇವರಲ್ಲಿ ನಿಷ್ಠಾವಂತರು ಎಷ್ಟು ಜನ ಎಂಬುದನ್ನು ತಿಳಿಯಲು ಮಣ್ಣನ್ನು ತೂರುತ್ತಾನೆ. ಆಗ ನೆರೆದವರೆಲ್ಲರೂ ಹದಿನೈದು ಕೊಳಗೆ ಜಾರಿ ಐದು ಕೊಳಗ ಉಳಿಯಿತು ಎಂದು ನುಡಿಯುತ್ತಾರೆ. ಆದರೆ ಗುಂಡಬಸವಣ್ಣನು, ಇಲ್ಲ ಹದಿನೆಂಟು ಕೊಳಗ ಜಾರಿ ಎರಡು ಕೊಳಗ ಉಳಿಯಿತೆಂದು ನುಡಿಯುತ್ತಾನೆ. ದೀಕ್ಷೆಯನ್ನು ಪಡೆದ ಬೋಳರಲ್ಲಿ ಗಟ್ಟಿಯಾಗಿ ಧರ್ಮಕಲ್ಯಾಣದಲ್ಲಿ ನೆಲೆ ನಿಲ್ಲುವರು ಕೇವಲ ಇಬ್ಬರು ಎನ್ನುವ ಅರ್ಥವನ್ನು ಸೂಚಿಸುತ್ತಿರಬೇಕು ಎಂದು ಅನಿಸುತ್ತದೆ.

ಧರ್ಮಕಲ್ಯಾಣದಲ್ಲಿ ಬೋಳರೆಂಬ ಅನುಯಾಯಿಗಳು ನೇಮಕವಾದ ಮೇಲೆ ಅವರಿಗೆ ನೀತಿ ಬೋಧನೆಯನ್ನು ಗುಂಡಬಸವಣ್ಣನು ಮಾಡಿದನು.

''ಪರಸತಿ ಪರಧನಕೊಳಗಾಗದಿರಿ ಮುಂದೆ
ಪರನಿಂದೆಗಳನಾಡ ಬೇಡಿ |
ಹರನು ಬಿಟ್ಟನು ಮೂರಕೆ ಮೂರೇ ಕೊಡನು
ಬರ ಭಯ, ರೋಗ ಮರ್ತ್ಯಯರ''[೬೨]

ಪರಸತಿ, ಪರಧನಕೊಳಗಾಗದಿರಿ ಮತ್ತು ಪರರಿಗೆ ನಿಂದೆಗಳನ್ನು ಆಡದಿರಿ ಎಂದು ಹೇಳುತ್ತಾನೆ. ಬೇರೆಯದಕ್ಕೆ ಆಸೆಯನ್ನು ಪಟ್ಟರೆ ಅದು ತಪ್ಪುದಾರಿ. ನಿನ್ನದೆನ್ನುವುದು ಕೇವಲ ಜ್ಞಾನ. ಅದನ್ನು ಸಂಪಾದಿಸಿ ಎಂದು ನುಡಿಯುತ್ತಾನೆ. ಶಿವನು ಭೂಲೋಕದ ಜನರಿಗೆ ಬರ, ಭಯ, ರೋಗ ಬಿಟ್ಟಿದ್ದಾನೆ. ದುರಾಸೆಗೆ ಒಳಗಾದವನಿಗೆ ಅವು ಕಟ್ಟಿಟ್ಟ ಬುತ್ತಿ ಎಂದು ಉಪದೇಶಿಸುತ್ತಾನೆ. ಶರಣೆಂದು ಬಂದವರಿಗೆ ಬಸವಣ್ಣ ನಿರಂತರ ಬೋಧೆಯನ್ನು ಮಾಡುತ್ತಿದ್ದನು.

ಧರ್ಮಕಲ್ಯಾಣ ಸ್ಥಾಪನೆಯಾದ ಮೇಲೆ ಗುಂಡಬಸವಣ್ಣನು ನಿರಂತವಾಗಿ ಧ್ಯಾನ, ಹೋಮ, ಹವನ, ಬೋಧನೆ, ಲಿಂಗಪೂಜೆ ಹೀಗೆ ಸದಾ ಅಧ್ಯಾತ್ಮದ ಅಮಲಿನಲ್ಲಿಯೇ ಇರತೊಡಗುತ್ತಾನೆ. ಅವನಿಗೆ ದೇಹಭಾವವಾಗಲಿ, ಜೀವಭಾವವಾಗಲಿ ಎಳ್ಳಷ್ಟು ಇರಲಿಲ್ಲ. ಮಠಕ್ಕೆ ಬಂದ ಭಕ್ತರನ್ನು ಎತ್ತರವಾದ ಪ್ರದೇಶದಲ್ಲಿ ಕುಳ್ಳಿರಿಸಿ ತಾನು ತಗ್ಗಿನಲ್ಲಿ ಕುಳಿತು ಬೋಧನೆಯನ್ನು ಮಾಡುತ್ತಿದ್ದನು. ಒಮ್ಮೆ ತೊಟ್ಟ ಉಡುಗೆಯು ಹರಿಯುವವರೆಗೂ ಬಿಚ್ಚುತ್ತಿರಲಿಲ್ಲ. ಅಂಗಮಜ್ಜನವನ್ನು ಬಿಟ್ಟು ಸದಾ ಲಿಂಗಮಜ್ಜನವನ್ನು ಮಾಡುತ್ತಿದ್ದನು. ದೇಹದ ಯಾವ ಸುಖವೂ ಅವನಿಗೆ ಬೇಡವಾಗಿವೆ. ಸದಾ ಶಿವಲಿಂಗದ ಸುಖವನ್ನು ಬಯಸುತ್ತಾನೆ. ಗುಂಡಬಸವಣ್ಣನು ದಿನಕ್ಕೆ ಹದಿನೇಳು ಬಾರಿ ಪೂಜೆಯನ್ನು ಮಾಡುತ್ತಿದ್ದನು. ಅದರಲ್ಲಿ ಅವಸರದ ಪೂಜೆ ಹತ್ತು. ಇದರಲ್ಲಿ ಸೂರ್ಯ ಉದಯಿಸುವುದಕ್ಕೂ ಮುನ್ನ ಆರು, ನಂತರ ಸೂರ್ಯ ಉದಯಿಸಿದ ನಂತರ ನಾಲ್ಕು ಈ ಸಂದರ್ಭಗಳಲ್ಲಿ ತನ್ನ ಇಷ್ಟಲಿಂಗಕ್ಕೆ ಮಜ್ಜನ, ಗಂಧ ಪುಷ್ಪ ಇತ್ಯಾದಿ ಪೂರೈಸುತ್ತಿದ್ದನು. ಪಂಚೇಂದ್ರಿಯಗಳನ್ನು ಲಿಂಗಮುಖಿಗೊಳಿಸಿ ಏಕಾಗ್ರತೆಯಿಂದ ಪೂಜೆ ಮಾಡುತ್ತಿದ್ದನು.

ಗುಂಡಬಸವಣ್ಣನು ನೀತಿ ಬೋಧನೆಯನ್ನು ಮಾಡುತ್ತ ಜನರ ಉದ್ಧಾರವನ್ನು ಮಾಡುತ್ತಾ ಅವತಾರಿ ಪುರುಷ ನೆನಿಸಿಕೊಂಡಿದ್ದಾನೆ. ಧರ್ಮ ಕಲ್ಯಾಣದಲ್ಲಿ ವರ್ಷದಲ್ಲಿ ನಾಲ್ಕು ಸಲ ಉತ್ಸವವನ್ನು ಮಾಡಲು ತೊಡಗಿಸುತ್ತಾನೆ.

''ಷಷ್ಠಿ ಶಿವರಾತ್ರಿ ದವನ ನೂಲ ಹುಣ್ಣಿಮೆ
ಗಟ್ಟಿಮಾಡಿದ ನಾಲ್ಕು ತಿಥಿಯ
ಕಟ್ಟಿಮಾಡಿದ ಬರಹೇಳಿ ಭಕ್ತರಿಗೆಲ್ಲ
ಸೃಷ್ಟಿಗೆ ತಾ ಹೆಸರಿಸಿ''

''ವರುಷಕೆ ನಾಲ್ಕು ತಿಥಿಯೊಳು ತಪ್ಪದಲೆಲ್ಲಾ
ಬರಬೇಕು ವ್ರತವು ಭಕ್ತರಿಗೆ
ಇರುಳು ಹಗಲು ಹೇಳುತಲಿ ತಾನೀಗ
ಪರಶಿವ ತತ್ವ ಬೋಧೆಯನು''[೨]

ವರ್ಷದಲಿ ನಾಲ್ಕು ಬಾರಿ ಅಂದರೆ ಷಷ್ಠಿ, ಶಿವರಾತ್ರಿ, ದವನದ ಹುಣ್ಣಿಮೆ ಮತ್ತು ನೂಲಹುಣ್ಣಿಮೆ ನಾಲ್ಕು ತಿಥಿಗಳನ್ನು ಗೊತ್ತುಮಾಡಿ ಭಕ್ತರಿಗೆ ಉತ್ಸವವನ್ನು ಮಾಡಲು ತಿಳಿಸುತ್ತಾನೆ. ನಾಲ್ಕು ದಿನಗಳಲ್ಲಿ ಭಕ್ತರು ತಪ್ಪದೇ ವ್ರತವನ್ನು ಆಚರಿಸಿರೆಂದು ಹೇಳುತ್ತಾನೆ.

''ತಿಪ್ಪಣ್ಣಯ್ಯನು ಗುಂಡಬಸವಣ್ಣನಿಗೆ ಒಂದು ಸಾರಿ ನಿಮ್ಮದು ಯಾವ ಕುಲ ಎಂದು ಪ್ರಶ್ನೆಯನ್ನು ಕೇಳುತ್ತಾನೆ. ಗುಂಡಬಸವಣ್ಣ ಜ್ಞಾನ ದೃಷ್ಟಿಯಿಂದ ಅವನಿಗೆ ಉತ್ತರವನ್ನು ನೀಡುತ್ತಾನೆ. ನಮ್ಮದು ದೇವಕುಲ, ಶಿವಜಾತಿ, ಐಕ್ಯಸ್ಥಲವೆಂದು ತಿಳಿಸುತ್ತಾನೆ. ತಿಪ್ಪಣ್ಣಯ್ಯ ನೀನು ಗುರುಲಿಂಗ ಜಂಗಮಪ್ರೇಮಿ. ತ್ರಿಮೂರ್ತಿಯನ್ನೊಳಗೊಂಡ ಮಹಿಮ ಎಂದು ತಿಪ್ಪಣ್ಣಯ್ಯ ಹೊಗಳಿದನು. ಗುಂಡಬಸವಣ್ಣನ ಈ ಧರ್ಮಕಲ್ಯಾಣ ಕ್ಷೇತ್ರ ನಾಗಾವಿಯು ಶ್ರೀಶೈಲ ಸೇತುಬಂಧಕ್ಕಿಂತ ಮಿಗಿಲೆಂದೂ, ಇದು ರಜತಾದ್ರಿಯೆಂದೂ, ನೀನೇ ಶಂಭೂವೆಂದು ಹೇಳುತ್ತಾನೆ.''[೩೩]

ತಿಪ್ಪಣ್ಣಯ್ಯನಿಗೆ ಇಹಲೋಕದ ಜೀವನ ಸಾಕೆನಿಸಿ ದೇಹವನ್ನು ಬಿಡುವ ನಿರ್ಧಾರಕ್ಕೆ ಬರುತ್ತಾನೆ. ಗುಂಡಬಸವಣ್ಣನಿಗೆ ನಾನು ಶಿವನ ಪಾದಕ್ಕೆ ಪ್ರಯಾಣ ಬೆಳೆಸುತ್ತೇನೆ ಅಪ್ಪಣೆ ನೀಡೆಂದು ಬೇಡಿಕೊಳ್ಳುತ್ತಾನೆ. ಅದಕ್ಕೆ ಗುಂಡಬಸವಣ್ಣನು ಭೂಮಿಯಲ್ಲಿ ದೇವರ ಕಾರ್ಯವನ್ನು ಮಾಡಲು ಇನ್ನೂ ಸಮಯವಿದೆ. ಆದ್ದರಿಂದ ತಾಳ್ಮೆ ಇರಲಿ ಎಂದು ನುಡಿಯುತ್ತಾನೆ. ಗುಂಡಬಸವಣ್ಣನ ಮಾತಿನ ಮೇರೆಗೆ ತಿಪ್ಪಣ್ಣಯ್ಯನು ಮತ್ತೆ ಮೂರು ವರ್ಷಗಳ ಕಾಲ ಬದುಕಿ ಉಳಿಯುತ್ತಾನೆ. ಮೂರು ವರ್ಷದ ಬಳಿಕ ತಿಪ್ಪಣ್ಣಯ್ಯ ಕೇಳಿದಾಗ ಗುಂಡಬಸವಣ್ಣನು ಅಪ್ಪಣೆಯನ್ನು ನೀಡುತ್ತಾನೆ. ತಿಪ್ಪಣ್ಣಯ್ಯ ಎಲ್ಲಿಯಾದರೂ ದೇಹ ಬಿಡುವೆನೆಂದು ಹೇಳಿದಾಗ ಬೇಡ ನಮ್ಮ ಕ್ಷೇತ್ರದಲ್ಲಿಯೇ ದೇಹ ಬಿಡು ಎಂದು ತಿಳಿಸುತ್ತಾನೆ. ಆ ಪ್ರಕಾರವಾಗಿ ತಿಪ್ಪಣ್ಣಯ್ಯ ಧರ್ಮಕಲ್ಯಾಣದಲ್ಲಿ ದೇಹ ಬಿಡುತ್ತಾನೆ. ಗುಹೆಯನ್ನು ಮಾಡಿ ಒಳಗೆ ಶವವಿಟ್ಟು ಮೇಲೆ ಗೋಪುರವನ್ನು ಮಾಡುತ್ತಾರೆ. ತಿಪ್ಪಣ್ಣಯ್ಯ ಅಗಲಿದ ಮೇಲೆ ಗುಂಡ ಬಸವಣ್ಣನು ಡಂಗೂರ ಪದಗಳನ್ನು ಸಾರುತ್ತಾ ಪ್ರಯಾಣ ಬೆಳೆಸುತ್ತಾನೆ.

ಗುಂಡಬಸವಣ್ಣನು ನಾಗಾವಿಯಲ್ಲಿ ಧರ್ಮಕಲ್ಯಾಣವನ್ನು ನಿರ್ಮಾಣ ಮಾಡಿ ಜನರನ್ನು ಉದ್ಧರಿಸಿದನು. ಭಕ್ತರು ಮತ್ತು ಬೋಳರನ್ನು ಬೆಳೆಸಿ ಅವರಿಗೆ ಸನ್ಮಾರ್ಗದತ್ತ ನಡೆಯಲು ದಾರಿಯನ್ನು ತೋರಿಸಿದನು. ಧರ್ಮಕಲ್ಯಾಣ ವೆನ್ನುವುದು ಕೇವಲ ಒಂದು ಧರ್ಮೀಯರಿಗೆ ಸೀಮಿತವಾಗಿರಲಿಲ್ಲ, ಅಲ್ಲಿ ಎಲ್ಲ ಧರ್ಮೀಯರು ಮುಕ್ತಿಯನ್ನು ಪಡೆಯಲು ಅವಕಾಶಗಳಿದ್ದವು. ಆದರೆ ಜ್ಞಾನ ಮಾರ್ಗದಲ್ಲಿ ನಡೆಯುವ ಕೆಲಸ ಕಷ್ಟವೆಂದು ತಿಳಿದಿದ್ದ ಸಾಮಾನ್ಯ ಜನಗಳು ಗುಂಡಬಸವಣ್ಣನನ್ನು ಹೊಗಳುತ್ತಿದ್ದರೆ ಹೊರತು ಹೆಚ್ಚಿನ ಸಂಖ್ಯೆಯಲ್ಲಿ ಅವನ ಅನುಯಾಯಿಗಳಿರಲಿಲ್ಲವೆಂದು ಅನಿಸುತ್ತದೆ. ಅವನು ಗಾಳಿಯಲ್ಲಿ ಮಣ್ಣು ತೂರಿ ಕೇವಲ ಎರಡು ಗಟ್ಟಿ ಬೀಜಗಳಿವೆ ಎನ್ನುವಂತಹ ಮಾರ್ಮಿಕ ಉತ್ತರ ಕೊಡುವುದನ್ನು ನೋಡಿದರೆ, ಸಾಮಾನ್ಯರಿಗೆ ದಿವ್ಯ ಜ್ಞಾನ ಇಲ್ಲ ಎನ್ನುವುದನ್ನು ತಿಳಿಸುತ್ತದೆ. ಹೀಗೆ ಧರ್ಮಕಲ್ಯಾಣದ ಆಚಾರ ವಿಚಾರಗಳೆಲ್ಲವು ಮೇರು ಮಟ್ಟದಾಗಿತ್ತೆಂದು ನಾವು ತಿಳಿಯಬಹುದಾಗಿದೆ.

### ೪.೪ ಗುರುಪರಂಪರೆ

ಶ್ರೀಗುರು ವಚನೋಪದೇಶವ ನಾಲಿಸಿದಾಗಳಹುದು ನರರಿಗೆ ಮುಕುತಿ''[೩೪] ಎನ್ನುವ ನಿಜಗುಣ ಶಿವಯೋಗಿಗಳ ಉಕ್ತಿಯಂತೆ, ಜಗತ್ತಿನ ಎಲ್ಲ ಮಹಾಪುರುಷರ ಹಿಂದೆ ಒಬ್ಬ ಗುರುವಿದ್ದಾನೆ. ''ಶ್ರೀ ಗುರುವರನಿಲ್ಲದವ ನೇನ ನೋದಲು ದೊರೆಯಲರಿಯದು ಸಮ್ಯಜ್ಞಾನ'' ಎನ್ನುವಂತೆ ಗುರುವಿನ ಒಲುಮೆ ಇಲ್ಲದೆ ಏನನ್ನು ಸಾಧನೆ ಮಾಡಲು ಸಾಧ್ಯವಿಲ್ಲ ಎಂಬುದನ್ನು ತಿಳಿಸುತ್ತದೆ. ಇಂತ ಗುರುಪರಂಪರೆಯನ್ನು 'ಆರೂಢ' ಪರಂಪರೆಯಲ್ಲಿ ಇಂದಿಗೂ

ಸಹ ಕಾಣುತ್ತೇವೆ. ಉದಾಹರಣೆಗೆ 'ಸಿದ್ಧಾರೂಢರ ಗುರುಗಳು' ಗಜದಂಡ ಸ್ವಾಮಿಗಳು. ಹಾಗೂ ಸಿದ್ಧಾರೂಢರ ಶಿಷ್ಯರು, ಗುರುನಾಥಾರೂಢರು, ಜಗತ್ತಿನಾದ್ಯಂತ ಅಪಾರ ಪ್ರಮಾಣದ ಶಿಷ್ಯಬಳಗವನ್ನು ಹೊಂದಿದ್ದಾರೆ. ಸಿದ್ಧಾರೂಢ ಮತ್ತು ಗುರುನಾಥಾರೂಢರ ಮಠಗಳು ಹೊರದೇಶದಲ್ಲಿ ಇರುವುದನ್ನು ನೋಡಿದರೆ, ಈ ಗುರುಪರಂಪರೆ ಮತ್ತು ಶಿಷ್ಯಪರಂಪರೆಯ ವಿಸ್ತಾರವನ್ನು ತಿಳಿಯಬಹುದಾಗಿದೆ.

ಪ್ರಸ್ತುತ ನಮ್ಮ ಈ ಅಧ್ಯಯನದಲ್ಲಿ ಗುಂಡಬಸವಣ್ಣನು ತನ್ನ ಗುರು ಯಾರು ಎನ್ನುವುದನ್ನು ಸ್ಪಷ್ಟವಾಗಿ ಹೇಳಿಲ್ಲ. ಆದರೆ ಪ್ರಾಸಂಗಿಕವಾಗಿ ಗುಂಡಬಸವಣ್ಣನ ಜೊತೆಗೆ ಅವನ ಗುರುವಿನ ಹೆಸರೂ ಸೇರಿಸಿ ಕೆಲವೆಡೆ ಉಲ್ಲೇಖಿಸಲಾಗಿದೆ. ಅವುಗಳ ಸಹಾಯದಿಂದ ಗುಂಡಬಸವೇಶ್ವರನ ಗುರು ಪರಂಪರೆಯನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.



### ೪.೪.೧ ಪರಮಾನಂದ ಪ್ರಭು

ಧರ್ಮಕಲ್ಯಾಣದ ರೂವಾರಿ ಎಂದು ಕರೆಯುವ 'ಗುಂಡಬಸವೇಶ'ನ ಗುರು, ಸಂಗಮನಾಥನಾಗಿದ್ದಾನೆ. ಸಂಗಮನಾಥನ ಗುರು ಈ ಪರಮಾನಂದ ಪ್ರಭುಗಳು. ಇತ್ತೀಚೆಗೆ ಅಮರಕಲ್ಯಾಣದ ರೂವಾರಿ ದಿಗ್ಗಿ ಸಂಗಮನಾಥ ಎಂದು ಅಧ್ಯಯನ ಮಾಡಲಾಗಿದ್ದು[೬೯] ದಿಗ್ಗಿ ಸಂಗಮನಾಥನೇ ಗುಂಡಬಸವಣ್ಣ ಮತ್ತು ಕೊಡೇಕಲ್ಲ ಬಸವಣ್ಣನ ಗುರುವಾಗಿದ್ದಾನೆ. ೧೨ನೇ ಶತಮಾನದಲ್ಲಿ ಸಮಯಕಲ್ಯಾಣ ಕಟ್ಟಿದ ಬಸವಣ್ಣನು ಪರಂಪರೆಯೆಂಬಂತೆ ವಿಜಯಕಲ್ಯಾಣ, ಅಮರ ಕಲ್ಯಾಣ, ಧರ್ಮಕಲ್ಯಾಣ, ಕಡೇಕಲ್ಯಾಣಗಳ ಮೂಲ ಪುರುಷನಾಗಿದ್ದಾನೆ.

''ಉತ್ತರ ಕರ್ನಾಟಕದ ಭಾಗದಲ್ಲಿ ಪರಮಾನಂದ ಪ್ರಭು ಸಂಚರಿಸಿ ಭಕ್ತರನ್ನು ಉದ್ಧರಿಸಿದನೆಂದು ಹೇಳಬಹುದು. ಅದಕ್ಕೆ ಉದಾಹರಣೆ ಎಂದರೆ ಉತ್ತರ ಕರ್ನಾಟಕದ ಭಾಗದಲ್ಲಿ ಪರಮಾನಂದನ ಗುಡಿಗಳಿದ್ದು ಅಪಾರ ಸಂಖ್ಯೆಯಲ್ಲಿ ಭಕ್ತರಿದ್ದಾರೆ. ವಿಜಾಪುರ ಜಿಲ್ಲೆಯ ಹೂವಿನ ಹಿಪ್ಪರಗಿ, ಉಕ್ಕಲಿ, ಮಸುಬಿನಹಾಳ (ಬಾಗೇವಾಡಿ ತಾಲೂಕು), ಚಾಂದ ಕವಟೆ (ಸಿಂದಗಿ ತಾಲೂಕ) ಗುಲಬರ್ಗಾ ಜಿಲ್ಲಾ, ಬಿ.ಹೆಬ್ಬಾಳ ಮುಂತಾದ ಊರುಗಳಲ್ಲಿ ಈ ಪರಮಾನಂದನ ಗುಡಿಗಳಿದ್ದು ಇಲ್ಲಿ ಈತ ಅಲ್ಲಮ ಪ್ರಭು ಹೆಸರಿನಲ್ಲಿ ಪೂಜೆಗೊಳ್ಳುತ್ತಿದ್ದಾನೆ. ಹೂವಿನ ಹಿಪ್ಪರಗಿಯಲ್ಲಿ ಈತನ ಮೇಲೆ ಬರೆದ ಅಷ್ಟೇನೂ ಪ್ರಾಚೀನವಲ್ಲದ ಪುರಾಣವೂ, ಹೇರಳವಾದ ಐತಿಹ್ಯಗಳೂ ಪ್ರಚಲಿತದಲ್ಲಿವೆ. ಈ ಐತಿಹ್ಯಗಳ ಪ್ರಕಾರ ತಮಿಳುನಾಡಿನ ಶಿವಕಂಚಿ ಈತನ ಊರು. ವಿಷ್ಣು ಕಂಚಿ ತಾಯಿಯ ಊರು. ತಂದೆ ತಾಯಿಗಳು ಮದುವೆ ಮಾಡಲು ಮುಂದಾದಾಗ ಈತ ಮನೆ ತೊರೆದು ದೇಶಾಂತರ ಹೊರಟು ಆಂಧ್ರದ ಕಡೆಗೆ ಬಂದನಂತೆ. ಕರ್ನಾಟಕದಲ್ಲಿ ಸಂಚರಿಸುತ್ತಾ ಹೆಬ್ಬೆಟ್ಟಿನ ಮೇಲೆ ಬಿ.ಹೆಬ್ಬಾಳದಲ್ಲಿ (ಸುರಪುರ ತಾಲೂಕು) ತಪೋನಿರತನಾದುದಾಗಿ ಹೇಳಲಾಗುತ್ತದೆ. ಈತನ ಹಿಂದೆ ಯಾವಾಗಲೂ ಸಿದ್ಧಪ್ಪ ಎಂಬಾತ ಇರುತ್ತಿದ್ದನೆಂದೂ ಹೆಬ್ಬಾಳದಲ್ಲಿ ನೆಲೆ ನಿಂತಾಗ ದಿಗ್ಗಿ ಸಂಗಮನಾಥ ಖಾದರಲಿಂಗ ಎಂಬ ಇಬ್ಬರೂ ಶಿಷ್ಯರು ಜೊತೆಯಾದರೆಂದೂ ಈ ಐತಿಹ್ಯಗಳ ಬಲವಾದ ನಂಬಿಕೆ.'' ದಿಗ್ಗಿಯಲ್ಲಿ ಸಂಗಮೇಶ್ವರನ ಗವಿಯೊಂದಿಗೆ ಮೇಲೆ ಪರಮಾನಂದ ಅಥವಾ ಪ್ರಭುದೇವರ ಗವಿ ಇರುವುದನ್ನು ಕಾಣಬಹುದು. ಪರಮಾನಂದರು ತಪೋನಿರತರಾದರೆಂದು ಹೇಳುವ ಹೆಬ್ಬಾಳದಲ್ಲಿ ಪರಮಾನಂದರ ಗುಡ್ಡವು ಈಗಲೂ ಇದೆ. ಪರಮಾನಂದ ಪ್ರಭುವು ಸಾಹಿತ್ಯ ರಚನೆ

ಮಾಡಿದಂತಿಲ್ಲ. ಅಮರಕಲ್ಯಾಣದ ಶರಣರಿಗೆ; ಪ್ರಧಾನವಾಗಿ ಆರೂಢ ಸಂಗಮೇಶನಿಗೆ ಈತ ಮಾಡಿರಬಹುದಾದ ಬೋಧ ಸಾಹಿತ್ಯ ದಾಖಲೆಯಾಗಿರದಿದ್ದರೂ ತನ್ನ ಕಾಲದ ಸಕಲರಿಗೆ ಬೋಧೆ ನೀಡಿದ ಅಪ್ರತಿಮ ಯೋಗಿ ಎಂಬುದರಲ್ಲಿ ಸಂಶಯವಿಲ್ಲ.

**೪.೪.೨ ದಿಗ್ಗಿ ಸಂಗಮನಾಥ**

ಗುಂಡಬಸವಣ್ಣನ ಗುರುವೆಂದು ಹೇಳಬಹುದಾದ ದಿಗ್ಗಿ ಸಂಗಮನಾಥನು ಗುಂಡಬಸವಣ್ಣನಿಗೆ ನೇರವಾಗಿ ಬೋಧನೆಯನ್ನು ಮಾಡಿದಂತೆ ಕಂಡುಬರುವುದಿಲ್ಲ. ಗುಂಡಬಸವಣ್ಣ ಅವತಾರಿ ಪುರುಷನಾಗಿ ಗುಂಡಬಸವೇಶ್ವರ ಚರಿತ್ರೆಯಲ್ಲಿ ಬಿಂಬಿತವಾಗಿದ್ದಾನೆ. ಗುಂಡಬಸವಣ್ಣ ಐದು ವರ್ಷದ ಬಾಲಕನಾಗಿರುವಾಗ ತಿಪ್ಪಣ್ಣಯ್ಯ ಈ ರೀತಿ ಹೇಳುತ್ತಾನೆ.

ಕೇಳು ನೀ ಬಸವಣ್ಣಾ ಹೇಳುವ ಮಾತನು
ಭಾಳಲೋಚನ ಭಕ್ತನೊಬ್ಬ |
ಹಳೆಯ ಸಗರದ ಹೊರಗೆ ಮಠಕಟ್ಟಿತಾ
ಇಳೆಯೊಳಮರಕಲ್ಯಾಣೆನಿಸಿ

ತಿಥಿನಾಲ್ಕು ಮಾಡಿದ ಆತ ತಾ ಬಸವಣ್ಣ
ಮತ್ತೆ ಭಕ್ತರು ಬೋಳರೆನಿಸಿ |
ಶ್ರುತಿಧರ್ಮ ಬೋಧೆಯ ಸಾರಿಸುತಲಿಹನು
ಮಥಿಸಿ ಮರ್ತ್ಯಮೋಡದೊಳಗೆ[೬೭]

ಇಲ್ಲಿ ತಿಪ್ಪಣ್ಣಯ್ಯ ಹೇಳುವಂತೆ ಹಳೆಯ ಸಗರದ ಎಂದರೆ ಇಂದು ತಾಲೂಕು ಸ್ಥಳವಾದ ಶಹಾಪುರವಾಗಿದೆ. ಈ ಗ್ರಾಮದ ಹೊರಗೆ ಅಂದರೆ ದಿಗ್ಗಿಯಲ್ಲಿ ಮಠ ಕಟ್ಟಿದ, ಭಾಳಲೋಚನನೆಂದರೆ ''ಪ್ರಾಣಲಿಂಗಿಸ್ಥಲವ ತಂದ ದಿಗ್ಗಿ ಸಂಗಮನಾಥನಾಗಿದ್ದಾನೆ.''[೬೮] ದಿಗ್ಗಿ ಸಂಗಮನಾಥನು ದಿಗ್ಗಿಯನ್ನು ಅಮರ ಕಲ್ಯಾಣವನ್ನಾಗಿ ಮಾಡಿ ವರ್ಷಕ್ಕೆ ನಾಲ್ಕು ತಿಥಿಯನ್ನು ಗುರುತು ಮಾಡಿ ಉತ್ಸವಗಳನ್ನು ಮಾಡುತ್ತಾನೆ. ಭಕ್ತರು ಮತ್ತು ಬೋಳರು ಎನ್ನುವಂತಹ ಅನುಯಾಯಿಗಳನ್ನು ಹುಟ್ಟುಹಾಕಿ ಬೋಧನೆಯನ್ನು ಮಾಡುತ್ತಾನೆ ಎಂದು ಹೇಳುತ್ತಾನೆ ತಿಪ್ಪಣ್ಣಯ್ಯ.

ಈ ಮಾತಿಗೆ ಉತ್ತರವಾಗಿ ಬಾಲಕ ಗುಂಡಬಸವಣ್ಣ ಹೀಗೆ ಹೇಳುತ್ತಾನೆ.

ಅಂದಮಾತನು ಕೇಳಿ ಎಂದೆಂಬ ಬಸವಣ್ಣ
ಮುಂದೆ ಭಕ್ತರು ಬೋಳರೆನಿಸಿ
ಕುಂದದೆ ನಾಲ್ಕು ತಿಥಿಯನು ಮಾಡುವೆ ನಾನು
ಎಂದಾಡುವನು ತಾನಾಡುತಲಿ.

ಡಂಗೂರ ಬೋಧೆಯ ಹಿಂಗದೇಹೇಳ್ವೆನು
ಅಂಗವಿಸಲು ಬಾರದಂತೆ
ಸಂಗಮೇಶ್ವರನ ಮೆಚ್ಚಿನ ನುಡಿ ನುಡಿದೆನಂ
ದಂಗವಣಿಗಳನಾಡುವನು.[೬೯]

ಬಾಲಕ ಬಸವಣ್ಣನು ಹಳೆಯ ಸಗರದ ಗುರುವಿನಂತೆ ನಾನು ತಿಥಿ ಉತ್ಸವಗಳನ್ನು ಮಾಡುತ್ತೇನೆ. ಡಂಗೂರ ಪದಗಳನ್ನು ರಚಿಸಿ ಬೋಧನೆ ಮಾಡುತ್ತೇನೆ. ಭಕ್ತ ಬೋಳರನ್ನು ಬೆಳೆಸುತ್ತೇನೆ. ಗುರು ಸಂಗಮೇಶ್ವರನ ನುಡಿಯನ್ನು ಸಾರುತ್ತೇನೆ ಎಂಬಂಥ ನುಡಿಗಳನ್ನು ನೋಡಿದರೆ ಗುಂಡಬಸವಣ್ಣ ಬಾಲ್ಯದಲ್ಲಿಯೇ ದಿಗ್ಗಿ ಸಂಗಮನಾಥನನ್ನು ಗುರುವೆಂದು ಸ್ವೀಕರಿಸಿ ಅವನ ಮಾರ್ಗದಲ್ಲೇ ಸಾಗುತ್ತಿದ್ದಾನೆ ಎಂದು ತಿಳಿಯುತ್ತದೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ಗುಂಡಬಸವೇಶ್ವರನಿಗೆ ಬಾಲ್ಯದಲ್ಲಿ ಸಂಗಮೇಶ್ವರನ ಕುರಿತು ಹೇಳಿದ ತಿಪ್ಪಣ್ಣಯ್ಯ ಮುಂದೆ ಗುರುವಿನ ವಿಷಯ ಪ್ರಸ್ತಾಪ ಬರುವುದಿಲ್ಲ. ಆದರೆ ಗುಂಡಬಸವಣ್ಣ ಐಕ್ಯವಾಗುವ ಕಾಲಕ್ಕೆ ಸಂಗಮೇಶ್ವರನ ಅಪ್ಪಣೆಯಾಯಿತು ಎಂಬ ಉಲ್ಲೇಖ ಬರುತ್ತದೆ. ಅದು ಹೀಗಿದೆ.

ಸಂಗಮೇಶ್ವರನ ನಿರೂಪವಾಯಿತು ಇಷ್ಟ
ಲಿಂಗಪೂಜೆಯ ಬಿಡು ಎನುತ
ಲಿಂಗವನೊಡ ವೆರೆವಾಗ ಲಿಂಗಪೂಜೆಗೆ ಮುಂದೆ
ಅಂಗವಿಸಲಿ ಬೇಡವೆನುತ ೪೦

ಗುಂಡಬಸವಣ್ಣನಿಗೆ ಅಂತ್ಯದಲ್ಲಿ ಇಷ್ಟಲಿಂಗ ಪೂಜೆಯನ್ನು ಬಿಡು ಎಂದು ಅಪ್ಪಣೆಯಾಯಿತು ಎಂದು ಉಲ್ಲೇಖ ವಿರುವುದರಿಂದ ಗುಂಡಬಸವಣ್ಣನ ಅಂತ್ಯಕಾಲದವರೆಗೂ ಸಂಗಮೇಶ್ವರ ಇದ್ದನೇ ಎಂಬ ಸಂಶಯ ವ್ಯಕ್ತವಾಗುತ್ತದೆ.

ಇನ್ನು ನಾಗಾವಿಯ ಶರಣ ಗುರು ಗುಂಡಬಸವನ ಅಂಕಿತನ ಸ್ವರ ವಚನಗಳಲ್ಲಿಯೂ ಸಹ ಸಂಗಮೇಶ್ವರನ ಉಲ್ಲೇಖವಿದೆ. ಸಂಗಮೇಶ್ವರನನ್ನು 'ಗುರು ಗುಂಡನರಾಯನ ಸ್ವಾಮಿ ಸಂಗಮೇಶ್ವರ'. 'ಸ್ವಾಮಿಸಂಗಯ್ಯ' 'ಸಂಗಮೇಶ್ವರ', 'ಸಂಗನಬಸವ' ಎಂದೆಲ್ಲ ಕರೆಯಲಾಗಿದೆ. ಅಂದರೆ ಗುಂಡಬಸವಣ್ಣನ ಅಲೌಕಿಕ ತಂದೆ ಸಂಗಮೇಶ ಎಂದು ಬಿಂಬಿಸಿರಬೇಕು. ಗುಂಡಬಸವನ ಅಂಕಿತದ ಸ್ವರವಚನಗಳು ಸಿಕ್ಕಿರುವುದು ಒಟ್ಟು ೬೩. ಇವುಗಳನ್ನು ಬರೆದವರು ಯಾರು ಎನ್ನುವುದು ನಿಖರವಾಗಿ ತಿಳಿದಿಲ್ಲ. ಆದರೆ ಗುಂಡಬಸವಣ್ಣನ ನಂತರ ನಾಗಾವಿಯಲ್ಲಿ ಬರುವ ಶರಣನೆಂದರೆ ಈರಪ್ಪಯ್ಯ. ನಾಗಾವಿಯಲ್ಲಿ ಇವನ ಗದ್ದಿಗೆ ಇದ್ದುದರಿಂದ ಈರಪ್ಪಯ್ಯನೇ ಬರೆದಿರುವ ಸಾಧ್ಯತೆಗಳಿವೆ ಎಂದು ಹೇಳಬಹುದು. ಈ ೬೩ ಪದ್ಯಗಳಲ್ಲಿ ೨೩ನೇ ಪದ್ಯವು ನಿಜಗುರು ಸಂಗನಬಸವ ಎಂಬ ಅಂಕಿತನಾಮದಲ್ಲಿದೆ. ಈ ಪದ್ಯದ ಪ್ರತಿ ಸಾಲಿನಲ್ಲಿಯೂ ಸಂಗನಬಸವ ಎಂಬ ಪದ ಬಳಕೆಯಲ್ಲಿದೆ.

''ಲಿಂಗದ ನೆಲೆಯ ಜಂಗಮದ ಮುನ್ನಿರೇ ನೀ ಸಂಗನಬಸವ
ಸಂಗಮೇಶ್ವರ ನಿಮ್ಮೊಳಗಾನಂದಿಪ ಸಂಗನಬಸವ ||ಪ||

ಎಣೆಗಾಣೆ ಜನದೊಳು ಠಣಕರಿಸುತಲಿದ್ದೆ ಸಂಗನಬಸವ
ಫಣಿಧರನದಿರೆ ಇಣೆಯೆರಿಸಿಕೊಂಡು ಸಂಗನಬಸವ
ದಣಿದು ಗೋಮಯವಿಕ್ಕಿ ಈಜಾಡುತಲಿದ್ದೆ ಸಂಗನಬಸವ
ಹಣೆಗಣ್ಣ ತೆರೆದ ಭಸ್ಮದಿ ಜಲಹೆಪ್ಪಿಟ್ಟೆ ಸಂಗನ ಬಸವ.

ಆದಿಯೊಳಗೆ ದೇವಗಾಧಾರವಾದೆಯಯ್ಯಾ ಸಂಗನಬಸವ ಶಿ
ಲಾದಗೆ ಶಿಶುವಾಗಿ ಸದ್ಗತಿಗಳನಿತ್ತೆ ಸಂಗನಬಸವ

ಮೇದಿನಿಯೊಳು ಮಂಡಗೆ ಮಾದಿರಾಜನು ಸಂಗನಬಸವ
ಮಾದಲಾಂಬಿಕೆಯ ಗರ್ಭೋದಯದಾದಿತ್ಯ ಸಂಗನಬಸವ
ಮಾದೇವನು ನೋಡಲಿಕಿದು ಮುಕುರವೊ ಸಂಗನಬಸವ
ಆದಿ ಅನಾದಿಯೊಳಪ್ರತಿಮನು ನೀ ಸಂಗನಬಸವ.
ಈ ಧರೆಯೊಳು ಕಲ್ಯಾಣಕೆ ನೀ ಬಂದು ಸಂಗನಬಸವ
ವಾದಿಗಳನು ಗೆದ್ದ ಪವಾಡ ಪುರುಷನೆ ಸಂಗನಬಸವ.

ಲಕ್ಷದ ಮೇಲೆ ತೊಂಬತ್ತಾರು ಸಾವಿರ ಸಂಗನಬಸವ ಜಂಗಮ
ಕ್ಕಿದೆ ಚೊಕ್ಕ ಭೋಜನ ಭಕ್ಷರಾಜಾನ್ನ ಸಂಗನಬಸವ
ಸೂಕ್ಷ್ಮ ನವನೀತವಾಕ್ಷಣದ ಸಭಿಕರ ಸಂಗನಬಸವ ನೀಡಿ
ಸಾಕೆಂದು ದಣಿಸಿದೆ ಶಕ್ಯ ಷಡುರಸದಿ ಸಂಗನಬಸವ

ಏಳುನೂರೆಪ್ಪತ್ತು ಅಮರಗಣ ಸಹ ಬಂದೆ ಸಂಗನಬಸವ ಬಂದು
ವೇಳೆ ವೇಳೆಗೆ ಪವಾಡವ ತೋರಿದೆ ಸಂಗನಬಸವ
ಹೇಳುವ ಕೊಂಡೆಯರೆದೆ ದಲ್ಲಣ ನೀ ಸಂಗನಬಸವ ನಿಮ್ಮ
ಕೇಳುವ ಬಿಜ್ಜಳರಾಯನ ಅಳವಲ್ಲ ಸಂಗನಬಸವ

ಪಂಚಪುರುಷನ ಪರಾಪರ ಮಹಿಮನೆ ಸಂಗನಬಸವ
ವಂಚನೆಯಿಲ್ಲದೆ ಲಿಂಗ ಜಂಗಮ ಕಿತ್ತೆ ಒಂದೇ ಪರಿ ಸಂಗನಬಸವ
ಪಂಚಮುಖನು ಬಂದು ಪ್ರಭು ಪರಿಣಮಿಸಿ ಸಂಗನಬಸವ
ಮಿಂಚಿನ ಹೊಳೆವ ಲಿಂಗವನಿತ್ತ ಮನಮೆಚ್ಚಿ ಸಂಗನಬಸವ

ಉತ್ತರಗಳನಿತ್ತೆ ಚಿತ್ತೈಸಿದಿರೆಂದು ಸಂಗನಬಸವ
ಮರ್ತ್ಯಕೆ ಬಹವೇಳುನೂರೆಪ್ಪತ್ತಕೆಂದು ಸಂಗನಬಸವ
ಮತ್ತದು ಥೈಸಿಯದೆ ನಾಗಾವಿಗೆ ಬಂದು ಸಂಗನಬಸವ
ಭಕ್ತಿಗೆ ಧರ್ಮಕಲ್ಯಾಣವೆಂದು ನಿಂದೆ ನಿಜಗುರು ಸಂಗನಬಸವ''[೪೮]

ಈ ಪದ್ಯದ ಪ್ರತಿಯೊಂದು ಸಾಲಿನಲ್ಲಿಯೂ ಸಂಗನಬಸವ ಎನ್ನುವ ಪದವನ್ನು ಬಳಸಿರುವುದರಿಂದ ಗುಂಡಬಸವಣ್ಣನಿಗೂ ಮತ್ತು ಸಂಗಮೇಶ್ವನಿಗೂ ಇರುವ ಸಂಬಂಧದ ಗಾಡತೆಯನ್ನು ತಿಳಿಸುತ್ತದೆ ಈ ಪದ್ಯದ ಪಲ್ಲವಿಯಲ್ಲಿ ''ಸಂಗಮೇಶ್ವರ ನಿಮ್ಮೊಳಗಾನಂದಿಪ ಸಂಗನಬಸವ'' ಎಂದು ಬಂದಿರುವುದರಿಂದ ಗುರುವಿನ ಆನಂದದಲ್ಲಿ ಕೃಪೆಯಲ್ಲಿ ಸದಾ ಗುಂಡಬಸವನಿದ್ದ ಎನ್ನುವುದನ್ನು ತಿಳಿಸುತ್ತದೆ. ಇಲ್ಲಿ ಬರುವ ಪವಾಡ ಸಂಗನಬಸನವನ ತಂದೆ ತಾಯಿಗಳ ಉಲ್ಲೇಖ ನೋಡಿದರೆ ಕಲ್ಯಾಣದ ಬಸವಣ್ಣ ದಿಗ್ಗಿ ಸಂಗಮನಾಥನಾಗಿ ಗುಂಡಬಸವಣ್ಣನಾಗಿ ನಿಂದ ಪರಿಯನ್ನು ಸಾರಿದಂತಿದೆ.

ಇನ್ನು ೩ನೇ ಪದ್ಯದಲ್ಲಿ ಗುಂಡಬಸವಣ್ಣನ ಗುರು ಸಂಗಮೇಶ್ವರನೆ ಎನ್ನುವುದಕ್ಕೆ ಆಧಾರ ಇದೆ ಎಂದು ಹೇಳಬಹುದು.

''ಧರೆಯ ತಿರುಗಲು ಶರಧಿಯ ದಾಟಿ ಹೋಗಲು
ಹಿರಿದುದ್ಯಮವ ಮಾಡಲು ನಿಲ್ಲದೆ ನಿಲ್ಲದೆ
ಹಿರಿದುದ್ಯಮವ ಮಾಡಲು
ಗುರುಗುಂಡರಾಯನ ಸ್ವಾಮಿ ಸಂಗಮೇಶ
ಬರೆದ ಬರೆದಷ್ಟು ಕಂಡಹಣೆಯಲಿ ಹಣೆಯಲಿ
ಬರೆದ ಬರೆದಷ್ಟು ಕಂಡ''[೪೨]

ಇಲ್ಲಿ ''ಗುರುಗುಂಡರಾಯನ ಸ್ವಾಮಿ ಸಂಗಮೇಶ'' ಎಂದು ಬಂದಿರುವುದರಿಂದ, ಗುಂಡಬಸವನ ಗುರು ಸಂಗಮೇಶ್ವರನೆ ಎಂದು ತಿಳಿಯುತ್ತದೆ.

ಹೀಗೆ ಗುರುಪರಂಪರೆಯಲ್ಲಿ ಬೆಳೆದುಬಂದಿರುವ ಗುಂಡಬಸವೇಶನು ಧರ್ಮಕಲ್ಯಾಣವನ್ನು ಗುರು ಸಂಗಮನಾಥನ ಅಮರಕಲ್ಯಾಣದ ಮಾದರಿಯಲ್ಲಿ ರಚಿಸಿದನು. ಅಷ್ಟೇ ಅಲ್ಲ, ಅಮರ ಕಲ್ಯಾಣದ ಮಾದರಿಯಂತೆ ತಿಥಿ ಉತ್ಸವಗಳನ್ನು ಮಾಡಿದನು ಎಂಬುದನ್ನು ತಿಳಿದಿದ್ದೇವೆ. ಆರೂಢ ಪರಂಪರೆಯಲ್ಲಿ ಗುರುವಿನ ಸ್ಥಾನ ಮಹತ್ತರವಾದದ್ದು. ನಿಜಗುಣರು ಹೇಳುವಂತೆ ''ಗುರುವರನೊಲವಿಲ್ಲದವ ನೇನ ಮೊದಲು ಹೊರೆಯಲರಿಯದು ಸಮ್ಯಜ್ಞಾನ'' ಎನ್ನುವ ಮಾತು ಸತ್ಯವೆನಿಸುತ್ತದೆ. ಗುರುವಿನ ಒಲುಮೆ ಇಲ್ಲದೆ ಏನನ್ನೂ ಮಾಡಲಾಗುವುದಿಲ್ಲ ಎನ್ನುವಂತದ್ದು ಗುರುವಿನ ಮಹತ್ವವನ್ನು ತಿಳಿಸುತ್ತದೆ. ಗುಂಡಬಸವಣ್ಣನು ದಿಗ್ಗಿಸಂಗಮನಾಥನನ್ನು ಗುರುವಾಗಿರಿಸಿಕೊಂಡು ಧರ್ಮಕಲ್ಯಾಣದ ರೂವಾರಿಯಾದನು ಎಂದು ತಿಳಿಯಬಹುದು.

೪.೫ ಐಕ್ಯ

ನಾಗಾವಿಯಲ್ಲಿ ಧರ್ಮಕಲ್ಯಾಣ ಸ್ಥಾಪನೆ ಮಾಡಿ, ಭಕ್ತರು ಮತ್ತು ಬೋಳರೆಂಬ ಶಿಷ್ಯವರ್ಗವನ್ನು ಹೊಂದಿದ ಗುಂಡಬಸವಣ್ಣ, ನುಡಿದಂತೆ ನಡೆದವನು. ಅದಕ್ಕೆ ಅವನು ಮಾಡಿದಂತಹ ಕಠೋರ ಭಕ್ತಿಯೇ ಅದಕ್ಕೆ ಉದಾಹರಣೆಯಾಗಿದೆ. ಮಹಿಮಾಪುರುಷರಿಗೆ ವಿಶೇಷ ಜ್ಞಾನವಿರುತ್ತದೆ ಎಂಬ ಮಾತು ಸುಳ್ಳಲ್ಲ. ಈ ವಿಚಾರದಲ್ಲಿ ಗುಂಡಬಸವಣ್ಣ ವಿಶೇಷತೆಯನ್ನು ಮೆರೆದಿದ್ದಾನೆ. ಗುರುಸಂಗಮೇಶ್ವರನು ಇಷ್ಟಲಿಂಗದ ಪೂಜೆ ಸಾಕು ಪ್ರಾಣಲಿಂಗವನ್ನು ಪೂಜೆ ಮಾಡು ಎಂದು ಅಪ್ಪಣೆ ಇತ್ತಾಗ, ಇದರ ಬಗ್ಗೆ ಬಹಿರಂಗದಲ್ಲಿ ತಾರ್ಕಿಕ ಘಟನೆ ಜರುಗುವವರೆಗೆ ಇಷ್ಟಲಿಂಗದ ಪೂಜೆ ನಿಲ್ಲಿಸಲಾರೆನೆಂದು ನುಡಿಯುತ್ತಾನೆ. ಒಂದು ಸಲ ಇಂತಹ ಘಟನೆ ನಡೆಯುವ ಪ್ರಸಂಗ ಬಂದೊದಗುತ್ತದೆ. ನಾಲ್ಕು ಜಂಗಮ ಸ್ಥಲಗಳಲ್ಲಿ ಎರಡಕ್ಕೆ ಕರಡಿಯ ವಾದ್ಯ ಸಲ್ಲುವುದಿಲ್ಲ, ಜಂಗಮನಲ್ಲದ ನಿನಗೇಕೆ 'ಕರಡಿ'ಯವೆಂದು ತರ್ಕಿಗಳು ವಾದಿಸುವರು. ಈ ವಾದ್ಯ ನನಗಲ್ಲ ಲಿಂಗಪೂಜೆಗೆ ಎಂದು ಬಸವಣ್ಣ ಉತ್ತರಿಸಿದ. ಕರಡಿಯ ಶಬ್ದವನ್ನು ಕೇಳಿದರೆ ನಿನ್ನನ್ನು ಕೊಲ್ಲುವೆವು ಎಂದು ತರ್ಕಿಗಳು ವಾದಿಸಿದಾಗ 'ಕರಡಿಯ ಶಬ್ದವನ್ನು ಕೇಳದ ಹೊರತು' ಲಿಂಗಪೂಜೆ ಮಾಡುವುದಿಲ್ಲವೆಂದು ನುಡಿದು, ಇಷ್ಟಲಿಂಗವನ್ನು ಬಿಟ್ಟು, ಪ್ರಾಣಲಿಂಗವನ್ನು ಪೂಜೆ ಮಾಡುತ್ತಾನೆ.[೪೩] ಮುಂದೆ ಶಿವನನ್ನು ಕುರಿತು ೧೨ ವರ್ಷ ಡಂಗೂರ ಸಾರಿದರೂ ಲೋಕ ಸತ್ಪಥಕ್ಕೆ ಬರುತ್ತಿಲ್ಲ ಏನು ಮಾಡಲಿ ಎಂದು ಕೇಳಿಕೊಂಡಾಗ, ಶಿವನು ''ಮರ್ತ್ಯದ

ಬಳಲಿಕೆ ಸಾಕು, ಮರಳಿ ಬಾ'' ಎಂಬ ಆದೇಶ ಮಾಡುತ್ತಾನೆ. ಗುಂಡಬಸವಣ್ಣ ಭೂಲೋಕವನ್ನು ಬಿಟ್ಟು ತೆರಳಲು ಸಮಯ ನಿಗದಿ ಮಾಡಿಕೊಳ್ಳುತ್ತಾನೆ. ಲಿಂಗೈಕ್ಯನಾಗಲು ಸಿದ್ಧತೆ ನಡೆಸುತ್ತಾನೆ.

ಗುಂಡಬಸವಣ್ಣ ಭಕ್ತರು ಮತ್ತು ಬೋಳರನ್ನು ಕರೆಯಿಸಿ, ತಾನು ಲಿಂಗೈಕ್ಯನಾಗುವ ವಿಚಾರವನ್ನು ತಿಳಿಸಿ, ತನಗೆ ಗವಿ ಮಾಡುವಂತೆ ತಿಳಿಸುತ್ತಾನೆ. ಈ ವಿಚಾರವನ್ನು ಕೇಳಿ ಎಲ್ಲರೂ ದುಃಖತಪ್ತರಾಗುತ್ತಾರೆ.

''ಎಕ್ಕಟಿ ಬೋಳರ ಕರದ್ಹೇಳಿದ ನಮಗೆ
ದೊಕ್ಕನೆ ಮನೆಮಾಡಿ ಎನಲು
ದುಃಖವ ಮಾಡುತ ಹೀಗೇಕೆ ಎಂದು ಮೈ
ಯಿಕ್ಕಿದವರು ಬೇಡವೆನುತ''[೪೪]

''ನಿಮಗೇಕೆ ದುಃಖ ಹೋಗೆನುತ ಕೋಪವ ಮಾಡಿ
ನಮಗೆ ಶಿವನ ಇಚ್ಛೆ ಎನುತ
ಆ ಮಾತಿಗವರೆಂದು ಪಯಣವೆನುತ ಕೇಳೆ
ತಾ ಮತ್ತೆ ವರುಷಕೆ ಎಂದ''[೪೫]

''ಎಲ್ಲಿ ಮಾಡಲಿ ಗವಿಯನು ಎಂದುಯೆನುತಲಿ
ಮೆಲ್ಲನೆ ಕೇಳಿದುಪ್ಪಾರ
ಸೊಲ್ಲಿಸಿದನು ತಾನು ತಿಪ್ಪಣ್ಣಯ್ಯಗಳೆಡ
ದಲ್ಲಿ ಬೀಡಾರ ಮಾಡೆನುತ

ನುಡಿದ ಹುಟ್ಟದು ಅಲ್ಲಿ ಕಲ್ಲೆಂದು ಸುತಾರಿ
ನುಡಿಯ ಕೇಳುತ ಗುಂಡರಾಯ
ಬೇಡಿ ಭೂಕಾಂತೆಗೆ ಶರಣೆನ್ನಿ ಕೊಟ್ಟಾಳು
ಕೊಡು ಗುಂಡಬಸವಯ್ಯಗೆನಲು''[೪೬]

ಗುಂಡಬಸವಣ್ಣ ಐಕ್ಯವಾದ ನಂತರ ತಿಪ್ಪಣ್ಣಯ್ಯನ ಪಕ್ಕದಲ್ಲಿಯೇ ಗದ್ದಿಗೆ ಮಾಡಿ ಗೋಪುರ ಮಾಡುತ್ತಾರೆ. ವರ್ಷಕ್ಕೆ ನಾಲ್ಕು ತಿಥಿ ಉತ್ಸವವನ್ನು ಮಾಡುತ್ತಾರೆ. ನಾಗಾವಿಯಲ್ಲಿ ತಿಪ್ಪಣ್ಣಯ್ಯ ಮತ್ತು ಗುಂಡಬಸವಣ್ಣನ ಗದ್ದಿಗೆಯು ಜೊತೆಯಾಗಿ ಇರುವುದನ್ನು ಈಗಲೂ ಕಾಣುತ್ತೇವೆ.

ನಮಗೆ ಶಿವನ ಇಚ್ಛೆಯಾಗಿದೆ, ನೀವು ಯಾರೂ ದುಃಖಿಸಬೇಡಿ. ಇನ್ನು ಒಂದು ವರ್ಷಕ್ಕೆ ಐಕ್ಯವಾಗುವುದಾಗಿ ನುಡಿಯುತ್ತಾನೆ. ಮುಂದೆ ನಾಗಾವಿಯಿಂದ ಮೈಲವಾರಕ್ಕೆ ಹೋಗಿ ವರ್ಷ ತುಂಬುವದರೊಳಗೆ ಭಕ್ತರನ್ನು ಕರೆಯಿಸಿ ಯಲ್ಲಾನಾಗಾವಿಗೆ ಬರುತ್ತಾನೆ. ಮಕ್ಕಳಿಗೆ, ಭಕ್ತರಿಗೆ ಬುದ್ಧಿ ಮಾತನ್ನು ಹೇಳಿ ಯಲ್ಲಾನಾಗಾವಿಗೆ 'ಧರ್ಮಕಲ್ಯಾಣ'ದ ಸನ್ನಿಧಿಗೆ ಮುಂದೆ ಶರಣರು ಬರಲಿದ್ದಾರೆ ಎಂದು ನುಡಿಯುತ್ತಾನೆ.

''ಬಂಬದು ಮುಂದೆ ದೈವದ ದೂರ್ತ ಕಂಡಂತೆ
ಹಂಬಲಿಸಲಿ ಬೇಡ ನೀವು
ಬೆಂಬಳಿ ಇರಿ ಧರ್ಮಕಲ್ಯಾಣ ಸನಿಹದಿ ತಂಬಣಾಹುದು ಮುಂದೆ ಎನುತ

ಸರ್ವತಹ ಧರ್ಮಕಲ್ಯಾಣ ತೆಲ್ಯಾದೆಂದು
ಅರಸಿಕೊಳುತಲಿ ಬಂದಾರು
ಬಾರದಿರ್ದರೆ ನೀವು ಸ್ಥಿತಿಸನ್ಯವಿರಲಿಕೆ
ಮೀರಿ ಹೋಗಲಿಬೇಡ ವೆಂದ''[೪೭]

ಧರ್ಮಕಲ್ಯಾಣವೆನ್ನುವುದು ಎಲ್ಲಿದೆ ಎಂದು ಹುಡುಕಿಕೊಂಡು ಶರಣರು ಬರುತ್ತಾರೆ ಎಂಬ ಸೂಚನೆಯನ್ನು ಕೊಡುತ್ತಾನೆ.

ಗುಂಡಬಸವಣ್ಣ ಏಳು ಜನ ಸತಿಯರನ್ನು ಹೊಂದಿದ್ದು ತನ್ನ ಕೊನೆ ಕಾಲದಲ್ಲಿ ಅವರನ್ನೆಲ್ಲ ಕರೆದು ಈ ರೀತಿ ನುಡಿಯುತ್ತಾನೆ.

``ಭಕ್ತರು ಬೋಳರಿಗೆಲ್ಲ ಬುದ್ಧಿಯ ಹೇಳಿದ
ಹತ್ತೆಲಿದ್ದವರಿಗೆಲ್ಲರಿಗೆ
ಮತ್ತೆ ಕರೆದ ಏಳುಮಂದಿ ಸ್ತ್ರೀಯರನೆಲ್ಲ
ಹತ್ತೆ ಕುಳ್ಳಿರಿಸಿ ಹೇಳಿದನು.
ಹಿರಿಯಸತಿಗೆ ಎಂದ ಹಿರಿಯಳು ನೀನಿದ್ದಿ
ಕಿರಿಯರು ಅವರಾರು ಮಂದಿ
ಹೊರಯ ಕೊಳೆಯ ಕ್ಹೋಗಗೊಡದೆ ಆಜ್ಞೆಯಮಾಡು
ತೀರು ನೀನು ಗಂಡನಾಗದೆ''[೪೮]

ಏಳುಜನ ಪತ್ನಿಯರನ್ನು ಹೊಂದಿದ್ದ ಗುಂಡಬಸವಣ್ಣ ಹಿರಿಯ ಸತಿ ನೀನೆ ಅವರಿಗೆ ಗಂಡನಾಗಿರು ಎಂದು ಹೇಳಿದ್ದು ನೋಡಿದರೆ ಮಾನಸಿಕವಾಗಿ ಧೃತಿಗೆಡದೆ ಧೈರ್ಯದಿಂದ ಬಾಳಿರಿ ಎಂದು ಹೇಳಿದಂತಿದೆ. ಒಟ್ಟು ಐದು ಜನ ಮಕ್ಕಳನ್ನು ಹೊಂದಿದ್ದ ಗುಂಡಬಸವಣ್ಣ ಒಬ್ಬನಿಗೆ ಶಿವಯೋಗವಿದೆ. ನನ್ನನು ಕಂಡ ರೀತಿಯಲ್ಲಿಯೇ ಅವನನ್ನು ಕಾಣಿರಿ ಎಂದು ಹೇಳಿ ತಿಪ್ಪಣ್ಣಯ್ಯನ ಗವಿಯ ಹತ್ತಿರ ಗವಿ ಮಾಡಿ ಎಂದು ಹೇಳಿದನು.

ತಿಪ್ಪಣ್ಣಯ್ಯನ ಗದ್ದಿಗೆಯ ಹತ್ತಿರ ಗವಿಯನ್ನು ತೋಡಲು ಹೋದಂತಹ ಉಪ್ಪಾರರಿಗೆ ಕಲ್ಲುಬಂಡೆ ಅಡ್ಡಬಂದಾಗ ಗುಂಡಬಸಪ್ಪನಿಗೆ ಹೀಗಾಯಿತು ಎಂದು ಹೇಳುತ್ತಾರೆ. ಆಗ ಗುಂಡಬಸಪ್ಪ ಭೂಮಿತಾಯಿಗೆ ಶರಣೆಂದು ಗುಂಡಬಸವಯ್ಯನಿಗೆ ಜಾಗ ಕೊಡಿ ಎಂದು ಕೇಳಿ, ಕೊಟ್ಟಾಳು ಎಂದು ನುಡಿಯುತ್ತಾನೆ. ಆಗ ಅಗೆದು ನೋಡಿದರೆ ಗವಿಯಂತಿರುವ ಆಕೃತಿಯು ಕಾಣುತ್ತದೆ. ಇವನಿಗೆಂದೇ ರಚಿಸಿರುವಂತಹ ಗವಿ ಇರುವುದನ್ನು ನೋಡಿ ಎಲ್ಲರೂ ಆಶ್ಚರ್ಯಪಡುತ್ತಾರೆ. ಆಗ ಬಸವಣ್ಣ ಇಂದಿಗೆ ಐದು ದಿನಕ್ಕೆ ಆದಿತ್ಯವಾರ ಪರಲೋಕಕ್ಕೆ ಪ್ರಯಾಣ ಎಂದು ನುಡಿಯುತ್ತಾನೆ. ತನ್ನ ಜನರನ್ನೆಲ್ಲ ಕರೆಯಿಸಿ ತಾನು ಇಹಲೋಕ ಬಿಡುವ ವಿಚಾರವನ್ನು ಅವರಿಗೆ ಹೇಳುತ್ತಾನೆ. ನೀವು ಹೋದರೆ ನಮಗಾರು ದಿಕ್ಕು ಎಂದು ಕೇಳಿಕೊಳ್ಳುತ್ತಾರೆ. ನಿಮಗೆ ಶಿವನೇ ದಿಕ್ಕು ಮುಂದೆ ಎರಡು ಮೂರು ವರ್ಷ ದುಃಖವಿದೆ. ನಂತರ ಸುಖವಾಗಿ ಬಾಳುವಿರಿ ಎಂದು ಹೇಳುತ್ತಾನೆ. ಹಿರಿಯ ಹೆಂಡತಿ

ನೀರು ಬಿಡಲಿ, ಕರಿಮಣಿ, ಓಲೆ ತೋಡೆ ಕಳಚಬೇಡಿರಿ. ಪುರುಷನಂತೆ ಬಾಳಿರಿ. ಅಳಬೇಡಿ ಎಂದು ನುಡಿಯುತ್ತಾನೆ.[೨೪] ಹಿರಿಯ ಹೆಂಡತಿ ನೀರು ಬಿಡುತ್ತಾಳೆ. ದೇವ ದುಂದುಬಿ ಮೊಳಗುತ್ತದೆ. ಗುಂಡಬಸವಣ್ಣ ಇಹಲೋಕ ಬಿಟ್ಟು ಹೋಗುತ್ತಾನೆ.

**ಟಿಪ್ಪಣಿಗಳು**

೧. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ. XVIII
೨. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೨೭,೨೮.
೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ. XVI
೪. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ. XVIII
೫. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೩೬
೬. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೫೭, ೫೮
೭. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೬೪
೮. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೫
೯. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೬೧
೧೦. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೬೭
೧೧. ನಿಜಗುಣರ ಸಮಗ್ರ ಕೃತಿಗಳು. (ಸಂ), ವಿದ್ಯಾಶಂಕರ ಪುಟ.೧೧
೧೨. ನಿಜಗುಣರ ಸಮಗ್ರ ಕೃತಿಗಳು. (ಸಂ), ವಿದ್ಯಾಶಂಕರ, ಪ್ರಸ್ತಾವನೆ, ಪುಟ.XXXII
೧೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ. XXVIII
೧೪. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.XX
೧೫. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.XXI
೧೬. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.XX
೧೭. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೭೯
೧೮. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೦
೧೯. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೦
೨೦. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೧
೨೧. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೩
೨೨. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೩, ೮೪
೨೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೫
೨೪. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೮೮

೨೫. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೯೦

೨೬. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೯೧

೨೭. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೯೧

೨೮. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೯೨

೨೯. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೯೮

೩೦. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೯೮

೩೧. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೦೦

೩೨. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೦೧

೩೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ. XXII

೩೪. ನಿಜಗುಣ ಶಿವಯೋಗಿಗಳ ಸಮಗ್ರ ಕೃತಿಗಳು (ಸಂ) ಎಸ್. ವಿದ್ಯಾಶಂಕರ, ಪುಟ.೧೧

೩೫. ದಿಗ್ಗಿ ಸಂಗಮನಾಥ: ಒಂದು ಅಧ್ಯಯನ, ಅಪ್ರಕಟಿತ (ಲೇ), ಅನುಪಮ ಆದಾಪುರ, ಪುಟ.೫೩

೩೬. ಕೊಡೇಕಲ್ ಬಸವಣ್ಣ ಒಂದು ಅಧ್ಯಯನ (ಲೇ) ಡಾ. ಬಸವಲಿಂಗಪ್ಪ ಸೊಪ್ಪಿನ ಮಠ ಪುಟ.೮೯

೩೭. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೫೮

೩೮. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.XVI

೩೯. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೫೮

೪೦. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೨೦

೪೧. ಗುಂಡಬಸವನ ಅಂಕಿತ ಸ್ವರವಚನಗಳು, (ಸಂ) ಡಾ ಬಿ.ಆರ್ ಹಿರೇಮಠ, ಪುಟ.೨೩

೪೨. ಗುಂಡಬಸವನ ಅಂಕಿತ ಸ್ವರವಚನಗಳು, (ಸಂ) ಡಾ ಬಿ.ಆರ್ ಹಿರೇಮಠ, ಪುಟ.೩೯

೪೩. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ.XVIV

೪೪. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೨೨

೪೫. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೨೩

೪೬. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೨೫

೪೭. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೨೬

೪೮. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ, ಪುಟ.೧೨೭

* * *

ಅಧ್ಯಾಯ ಐದು

# ಧರ್ಮಕಲ್ಯಾಣ ಪರಂಪರೆ ಮತ್ತು ಸಾಹಿತ್ಯ

## ಧರ್ಮಕಲ್ಯಾಣ ಪರಂಪರೆ ಮತ್ತು ಸಾಹಿತ್ಯ

ಗುಂಡಬಸವಣ್ಣನು ನಾಗಾವಿಯಲ್ಲಿ ಧರ್ಮಕಲ್ಯಾಣವನ್ನು ಸ್ಥಾಪನೆ ಮಾಡಿ, ಜನರ ಕಲ್ಯಾಣಕ್ಕೆ ಶ್ರಮಿಸಿದ ಜೀವಿ. ಗುಂಡಬಸವಣ್ಣ ಕೇವಲ ಬೋಧನೆಯನ್ನು ಮಾಡಲಿಲ್ಲ, ನುಡಿದಂತೆ ನಡೆದವನು. ಇವನ ನಡತೆಯನ್ನು ನೋಡಿ ಇವನಂತಾಗುವ ಒಂದು ಬಳಗ ಸೃಷ್ಟಿಯಾಯಿತೇ ಹೊರತು, ತಾನೇ ಶಿಷ್ಯ ಪರಂಪರೆಯನ್ನು ಬೆಳೆಸಲಿಲ್ಲ. ಗುಂಡಬಸವಣ್ಣ ಭಕ್ತರು ಮತ್ತು ಬೋಳರು ಎನ್ನುವ ಅನುಯಾಯಿಗಳನ್ನು ಬೆಳೆಸಿದರೂ ಅವರು ಸ್ವಇಚ್ಛೆಯಿಂದ ಮುಂದೆ ಬಂದು ಕಾರ್ಯಕರ್ತರಾದವರು. ಊರ ಹೊರಗೆ ಮಠಕಟ್ಟಿದ ಬಸವಣ್ಣ ತನ್ನ ಆಪ್ತರನ್ನು ಕರೆದು ಹೀಗೆ ನುಡಿಯುತ್ತಾನೆ. ದೇವರ ಆಚಾರಕ್ಕೆ ನಿಷ್ಠೆಯಿಂದ ನಿಲ್ಲುವವರು ಮುಂದೆ ಬನ್ನಿರಿ ಎನ್ನುತ್ತಾನೆ. ಆಗ ಕೆಲವರು ಮುಂದೆ ಬರುತ್ತಾರೆ. ಅವರಿಗೆ ಬೋಳರು ಎಂದು ಹೆಸರನ್ನಿಟ್ಟು ಅವರ ಮುಂಗೈಗೆ ಕಂಕಣವನ್ನು ಕಟ್ಟಿ ಬಳಿಕ ಗುಂಡಬಸವಣ್ಣ ಮಣ್ಣು ತೂರುತ್ತಾನೆ. ನೆರೆದವರೆಲ್ಲರು ೧೫ ಕೊಳಗ ಜೊಳ್ಳು ಹಾರಿ ೫ ಕೊಳಗ ಉಳಿಯಿತು ಎನ್ನುತ್ತಾರೆ.[೧] ಆದರೆ ಗುಂಡಬಸವಣ್ಣ ೧೮ ಕೊಳಗ ಹಾರಿ ೨ ಕೊಳಗ ಉಳಿಯಿತು ಎನ್ನುತ್ತಾನೆ. ಬಹುಶಃ ೨ ಕೊಳಗ ಉಳಿಯಿತು ಎನ್ನುವುದೇ ಗುಂಡಬಸವಣ್ಣನ ಪರಂಪರೆಯನ್ನು ಮುಂದುವರಿಸಿದ ಶಿಷ್ಯರೆಂದು ಕರೆಯಬಹುದು. ಈ ಇಬ್ಬರಲ್ಲಿ ಒಬ್ಬ ಗುಂಡಬಸವಣ್ಣನ ಹಿರಿಯ ಸಮಕಾಲೀನ ವ್ಯಕ್ತಿಯಾದ ತಿಪ್ಪಣ್ಣಯ್ಯ ಮತ್ತು ಗುಂಡಬಸವಣ್ಣನ ನಂತರ ಬರುವ ಕಕ್ಕಳಮೇಲಿಯ ಅಲ್ಲಮ ಪ್ರಭುವೆಂದು ಹೇಳಬಹುದು. ನಾಗಾವಿಯಲ್ಲಿ ಗುಂಡಬಸಪ್ಪ ಮತ್ತು ತಿಪ್ಪಣ್ಣಯ್ಯರ ಗದ್ದಿಗೆಯ ಹತ್ತಿರ ಈರಪ್ಪಯ್ಯನ ಗದ್ದಿಗೆ ಇದ್ದು ಇಂದಿಗೂ ಅದು ಪೂಜೆಗೊಳ್ಳುತ್ತಿದೆ. ಈ ಅಂಶವನ್ನು ನೋಡಿದರೆ ಧರ್ಮಕಲ್ಯಾಣ ಪರಂಪರೆಯನ್ನು ಬೆಳೆಸುವಲ್ಲಿ ಈರಪ್ಪಯ್ಯನದು ಬಹುಮುಖ್ಯ ಪಾತ್ರವಿದೆ ಎಂದು ತಿಳಿಯುತ್ತವೆ. ಒಟ್ಟಿನಲ್ಲಿ ಧರ್ಮಕಲ್ಯಾಣ ಪರಂಪರೆಯನ್ನು ಮುಂದುವರಿಸಿದವರೆಂದು ತಿಪ್ಪಣ್ಣಯ್ಯ, ಕಕ್ಕಳಮೇಲಿ ಅಲ್ಲಮಪ್ರಭು, ಈರಪ್ಪಯ್ಯ, ಸಾಲೋಟಗಿ ಶಿವಯೋಗಿಗಳನ್ನು ಗುರುತಿಸಬಹುದು.

### ೫.೧. ನಾಗಾವಿಯ ತಿಪ್ಪಣ್ಣಯ್ಯ

ತಿಪ್ಪಣ್ಣಯ್ಯ ನಾಗಾವಿಯ ಮಲ್ಲಿಸೆಟ್ಟಿ ಎಂಬುವರ ಮಗ. ಇವನು ಗುಂಡಬಸವಣ್ಣನ ಹಿರಿಯ ಸಮಕಾಲೀನ ವ್ಯಕ್ತಿಯಾಗಿದ್ದಾನೆ. ತಿಪ್ಪಣ್ಣಯ್ಯ ಸಾತ್ವಿಕ ಸ್ವಭಾವದವನಾಗಿದ್ದು ಸಂತನಾಗಿದ್ದನು. ತಿಪ್ಪಣ್ಣಯ್ಯನಿಗೆ ಭವಿಷ್ಯತ್ತಿನ ವಿವರ ಮೊದಲೇ ತಿಳಿಯುತ್ತಿದ್ದವು ಎಂಬುದಕ್ಕೆ ಸ್ಪಷ್ಟ ಉದಾಹರಣೆ ಈ ಕೆಳಗಿನಂತಿದೆ.

ಪುರವು ನಾಗವಿಯೊಳಿರೆ ನಾಗಿಸೆಟ್ಟಿಯ
ವರಸತಿ ನಾಮ ಕಾಮಮ್ಮ
ಹರನ ಭಕ್ತರು ಮುಗ್ಧಭಾವದಲಿರುತಿರೆ
ಪರಮ ಮೂರುತಿ ನೆಲಸಿದನು.
ಒಪ್ಪದಿಂದಲಿ ಗುಂಡ ಗರ್ಭದೊಳಿರುತಿರೆ
ತಿಪ್ಪಣ್ಣಯ್ಯನೆಂಬ ಮಹಿಮ
ತಪ್ಪದೆ ಶಿವನೇಕ ಮುಖವಿಲ್ಲಿ ಬಹುದೆಂದು
ಇಪ್ಪ ಮಹಿಮೆಯನೇನೆಂಬೆ.[೨]

ನಾಗಾವಿ ಎಂಬ ಪುರದಲ್ಲಿ ನಾಗಿಸೆಟ್ಟಿ ಮತ್ತು ಕಾಮಮ್ಮ ಎಂಬ ದಂಪತಿಗಳಿದ್ದರು. ಕಾಮಮ್ಮ ಗರ್ಭವತಿಯಾಗಿರುವ ಸಂದರ್ಭದಲ್ಲಿ, ತಿಪ್ಪಣ್ಣಯ್ಯನು ಶಿವನ ಒಂದು ಮುಖ ಇಲ್ಲಿ ಅವತರಿಸಲಿದೆ ಎಂದು ನುಡಿಯುತ್ತಾನೆ. ಇವನ ಮಾತು ಸತ್ಯವೆನ್ನುವಂತೆ ಮುಂದೆ "ಧರ್ಮಕಲ್ಯಾಣದ" ರೂವಾರಿಯಾದ ಗುಂಡಬಸವಣ್ಣ ಜನಿಸುತ್ತಾನೆ.

ತಿಪ್ಪಣ್ಣಯ್ಯ ಬೆಳೆದು ದೊಡ್ಡವನಾಗುತ್ತಿದ್ದಂತೆಯೇ ಮದುವೆಯ ಪ್ರಸ್ತಾಪ ಬರುತ್ತದೆ. ಮದುವೆ ಇಷ್ಟವಿಲ್ಲವೆಂದು ಹೇಳಿದರೂ ಕೇಳದೆ ತಂದೆ ಮಲ್ಲಿಶೆಟ್ಟಿಯು ಅರಸುಗ್ರಾಮಕ್ಕೆ ಹೋಗಿ ಕನ್ನೆಯನ್ನು ನಿಶ್ಚಯ ಮಾಡಿಬರುತ್ತಾರೆ. ಮದುವೆ ನಡೆದುಹೋಗುತ್ತದೆ. ಆದರೆ ತಿಪ್ಪಣ್ಣಯ್ಯನಿಗೆ ಸತಿ, ಸಂಸಾರ ಬೇಡವೆನಿಸುತ್ತದೆ. ಮನೆ ತೊರೆದು ಹೋಗುತ್ತಾನೆ. ಸರಳಜೀವನ ನಡೆಸುತ್ತಾನೆ. ಸಮಾಜದ ಜನರಿಗೆ ಒಳ್ಳೆಯದಾಗುವಂತಹ ಕೆಲಸಗಳಲ್ಲಿ ತೊಡಗುತ್ತಾನೆ. ಗುದ್ದಲಿ, ಸಲಿಕೆ ತೆಗೆದುಕೊಂಡು ಊರದಾರಿ ಸ್ವಚ್ಛ ಮಾಡುವುದು, ಕೆರೆ ದುರಸ್ತಿ ಮಾಡುವುದು, ಮರಕ್ಕೆ ನೀರುಣಿಸುವುದು, ಬಾವಿಯ ಹೂಳೆತ್ತುವುದು, ಹಾವು, ಚೇಳು ಕೊಲ್ಲದಿರುವದು, ಈ ಕೆಲಸಗಳನ್ನು ಮಾಡತೊಡಗಿದ ಈತ ಊಟ ಮಾಡಿದ ಬಡವರ ಮನೆ ಶ್ರೀಮಂತವಾದವು. ಊಟ ನೀಡದೇ ಇರುವ ಮನೆಗಳು ಬಡವಾದವು. ಹೀಗೆ ತಿಪ್ಪಣ್ಣಯ್ಯ ಜನೋಪಕಾರಿ ಕೆಲಸ ಮಾಡುವ ಮೂಲಕ ಸಂತನೆನಿಸಿಕೊಂಡಿದ್ದನು.

ನಾಗಾವಿಯಲ್ಲಿ ನಾಗಿಸೆಟ್ಟಿ ಮತ್ತು ಕಾಮಮ್ಮ ದಂಪತಿಗಳಿಗೆ ಜನಿಸಿದ ಮಗುವನ್ನು ನೋಡಲು ತಿಪ್ಪಣ್ಣಯ್ಯ ಬಂದು ಹೀಗೆ ನುಡಿಯುತ್ತಾನೆ.

ಬಂದನು ತಿಪ್ಪಣ್ಣಯ್ಯನು ಮಾತನಾಡಿಸೇ
ನೆಂದು ನಿಂದನು ತೊಟ್ಟಿಲಡಿಯ
ಬಂದರೆ ಸತ್ಯಶರಣ? ಸರ್ವಾಂಗಲಿಂಗಿ
ಯೆಂದು ನುಡಿಸುತಿರ್ದನಾಗ
ನುಡಿಸಿದ ಶಬ್ದಕ್ಕೆ ಹೊಡೆದ ತೊಣಲ ಮೂರ
ಎಡಬಲದವರು ಕೇಳುವಂತೆ

ಧಡಧಡನೆ ಶರಣೆಂದು ನೆಡೆಗೊಂಡ ಹೊರಯಿಕೆ
ಕಡುನಲುನಲಿ ತಿಪ್ಪಣ್ಣಯ್ಯ"[೫]

ಶಿಶು ಬಸವನನ್ನು ನೋಡಲು ಬಂದ ತಿಪ್ಪಣ್ಣಯ್ಯ ತೊಟ್ಟಿಲಲ್ಲಿ ಮಲಗಿರುವ ಶಿಶುವನ್ನು ನೋಡಿದವನೇ ಸತ್ಯಶರಣ, ಸರ್ವಾಂಗಲಿಂಗಿ ಎಂದು ಮಾತನಾಡಿಸುತ್ತಾನೆ. ನೋಡುತ್ತಿದ್ದ ಜನರೆಲ್ಲರು ಐದು, ಆರು ದಿವಸದ ಶಿಶುವನ್ನು ಮಾತನಾಡಿಸುವುದನ್ನು ನೋಡಿ ಸೋಜಿಗ ಪಟ್ಟುಕೊಳ್ಳುತ್ತಾರೆ. ಹಾವಿನ ಹೆಜ್ಜೆ ಹಾವು ಬಲ್ಲವು ಎಂದೂ ಮತ್ತು ದೇವಭಕ್ತರ ಮಹಿಮೆ ದೇವಭಕ್ತರಿಗಲ್ಲದೆ ಭವಜೀವಿಗಳಿಗುಂಟೆ ಎಂದು ಮಾತನಾಡಿಕೊಳ್ಳುತ್ತಾರೆ.

ಶಿಶುವನ್ನು ನೋಡುತ್ತ ನೆರೆದ ಎಲ್ಲ ಜನರಿಗೆ ತಿಪ್ಪಣ್ಣಯ್ಯ ಹೀಗೆ ನುಡಿಯುತ್ತಾನೆ.

''ಇಲ್ಲಿ ಮಠವ ಮಾಡಿ ಇಲ್ಲಿ ಮನೆಯ ಕಟ್ಟಿ
ಸಿಲ್ಲಿ ಬಾವಿಯ ತೋಡಿಸಿಹನು
ಬಲ್ಲಿದ ಶಿವಶರಣನು ನಿಂತಾನಿಲ್ಲೆಂದು
ಅಲ್ಲಿ ತಾ ಸವುರಿಸುತಿಹನು.''[೬]

ನೆಲವನ್ನು ಹಸನು ಮಾಡುತ್ತ ಬಸವಣ್ಣ ಇಲ್ಲಿ ಮಠವನ್ನು ಮಾಡಿ ಮನೆಯನ್ನು ಕಟ್ಟುತ್ತಾನೆ ಎಂದು ಶಿವಶರಣನನ್ನು ಕುರಿತು ಅಭಿಪ್ರಾಯ ವ್ಯಕ್ತಪಡಿಸುತ್ತಾನೆ. ಬಸವಣ್ಣ ಐದಾರು ವರ್ಷದ ಬಾಲಕನಾಗಿ ಬೆಳೆದ ಮೇಲೆ ತಿಪ್ಪಣ್ಣಯ್ಯ ಒಂದು ದಿನ ಹೀಗೆ ನುಡಿಯುತ್ತಾನೆ. "ಭಕ್ತನೊಬ್ಬ ಹಳೆಯ ಸಗರದ ಹೊರಗೆ ಮಠಕಟ್ಟಿ 'ಅಮರಕಲ್ಯಾಣ'ವನ್ನು ಬೆಳೆಸಿದನು. ವರ್ಷಕ್ಕೆ ನಾಲ್ಕು ತಿಥಿ ಉತ್ಸವಗಳನ್ನು ಮಾಡಿದನು. ಭಕ್ತರು, ಬೋಳರು ಎನ್ನುವ ಅನುಯಾಯಿಗಳನ್ನು ಬೆಳೆಸಿದನು ಎಂದು ನುಡಿಯುತ್ತಾರೆ. ಇದಕ್ಕೆ ಬಾಲಕ ಬಸವಣ್ಣ ನಾನು ಭಕ್ತರೂ ಬೋಳರನ್ನು ಬೆಳೆಸುತ್ತೇನೆ. ನಾಲ್ಕು ತಿಥಿ ಉತ್ಸವಗಳನ್ನು ಮಾಡುತ್ತೇನೆ. ಸಂಗಮೇಶ್ವರನ ಡಂಗುರ ಬೋಧೆ ಹೇಳುತ್ತೇನೆ ಎಂದು ನುಡಿಯುತ್ತಾನೆ.'' ತಿಪ್ಪಣ್ಣಯ್ಯ ಬಾಲಕ ಬಸವಣ್ಣ ದೈವೀ ಪುರುಷ ಎಂದು ಅವನಿಗೆ ಗುರು ಸಂಗಮೇಶ್ವರನ ಆಚರಣೆಯನ್ನು ಹೇಳುತ್ತಾನೆ. ಅವನ ಅನುಯಾಯಿಯಾಗುತ್ತಾನೆ.

ಒಂದು ಸಾರಿ ಗುಂಡಬಸವಣ್ಣ ಮತ್ತು ತಿಪ್ಪಣ್ಣಯ್ಯ ಇಬ್ಬರೇ ಇರುವ ಸಂದರ್ಭದಲ್ಲಿ, ತಿಪ್ಪಣ್ಣಯ್ಯ ಹೀಗೆ ನುಡಿಯುತ್ತಾನೆ.

ಯಾವ ಕುಲವು ನಿಮ್ಮದಾವ ಜಾತವು ನಿಮ್ಮ
ದಾವ ಸ್ಥಲವು ನಿಮ್ಮದೆನುತ
ಯಾವ ಬಿರುದು ನಿಮ್ಮದ್ಧೇಳೆಂದು ಕೇಳಿದ
ದೇವಭಕ್ತನು ತಿಪ್ಪಣ್ಣಯ್ಯ[೭]

ತಿಪ್ಪಣ್ಣಯ್ಯ ನಿಮ್ಮದು ಯಾವ ಕುಲ? ಯಾವ ಜಾತಿ? ಯಾವಸ್ಥಳ? ಇತ್ಯಾದಿಯಾಗಿ ಕೇಳುತ್ತಾನೆ. ಶಿವಸ್ವರೂಪಿಯಾದ ಗುಂಡಬಸವಣ್ಣನು ಸಂದರ್ಭಕ್ಕೆ ಉಚಿತವೆನ್ನುವಂತೆ ಸೂಕ್ತ ಉತ್ತರ ನೀಡುತ್ತಾನೆ.

ದೇವಗುಲವು ಇನ್ನು ಕೇಳಿ ತಿಪ್ಪಣ್ಣಯ್ಯ
ಶಿವಜಾತ ನಮ್ಮದುಯೆಂದು

ಯಾವ ಸ್ಥಲವು ಎಂದು ಕೇಳಿದರಿಂತಿದು

ಭಾವಿಸಲೈಕ್ಯ ಸ್ಥಲಗಳು[4]

ನಮ್ಮದು ದೇವಕುಲ, ಶಿವಜಾತಿ, ಐಕ್ಯಸ್ಥಲವೆಂದು ತಿಳಿಸಿದನು. ತಿಪ್ಪಣ್ಣಯ್ಯ "ನೀನು ಗುರು, ಲಿಂಗ, ಜಂಗಮ ಪ್ರೇಮಿ ತ್ರಿಮೂರ್ತಿಯನ್ನೊಳಗೊಂಡ ಮಹಿಮ" ಎಂದು ನುಡಿಯುತ್ತಾನೆ. ನಾಗಾವಿಯು ಗುಂಡಬಸವಣ್ಣನಿಂದ ಶ್ರೀಶೈಲ ಸೇತುಬಂಧಕ್ಕಿಂತ ಮಿಗಿಲವೆಂದೂ ಇದು ರಜತಾದ್ರಿ, ನೀನೇ ಶಂಭುವೆಂದು ತಿಪ್ಪಣ್ಣಯ್ಯ ಹೇಳುತ್ತಾನೆ. ತಿಪ್ಪಣ್ಣಯ್ಯ ಗುಂಡಬಸವನ ಜೊತೆಗಿದ್ದು ಧರ್ಮಕಲ್ಯಾಣದ ಆಚಾರ, ವಿಚಾರಗಳನ್ನು ಪಾಲಿಸಿದನು. ದಿನಕಳೆದಂತೆ ತಿಪ್ಪಣ್ಣಯ್ಯ ಇಹಲೋಕದ ಜೀವನ ಸಾಕೆನಿಸಿ ಶಿವನ ಪಾದಕ್ಕೆ ತಾನು ಪ್ರಯಾಣ ಬೆಳೆಸುವುದಾಗಿ ಗುಂಡಬಸವಣ್ಣನಲ್ಲಿ ಬೇಡಿಕೊಳ್ಳುತ್ತಾನೆ. ಬಸವಣ್ಣ "ನಾವು ದೇವರ ಮಣಿಹವನ್ನು (ಕಾರ್ಯವನ್ನು) ಇನ್ನೂ ಮಾಡಬೇಕಾಗಿದೆ. ಕಾರಣ ಈ ಬಗ್ಗೆ ವ್ಯವಧಾನವಿರಲಿ" ಎಂದು ಹೇಳುತ್ತಾನೆ. ನಂತರ ಎರಡು ಮೂರು ವರ್ಷಗಳು ಕಳೆದ ಮೇಲೆ ಅಪ್ಪಣೆ ಕೊಡುತ್ತಾನೆ. ತಿಪ್ಪಣ್ಣಯ್ಯ ದೇಹ ಬಿಡುವುದು ಎಲ್ಲಿ ಎಂದು ಕೇಳಿದಾಗ, ನಮ್ಮ ಧರ್ಮಕಲ್ಯಾಣ ಕ್ಷೇತ್ರದಲ್ಲಿ ಎಂದು ಬಸವಣ್ಣ ನುಡಿದು ಸಮಾಧಾನ ಮಾಡುತ್ತಾನೆ. ಮುಂದೆ ತಿಪ್ಪಣ್ಣಯ್ಯ ಪ್ರಾಣ ಬಿಟ್ಟ ಮೇಲೆ ಗುಂಡ ಬಸವಣ್ಣ ಗವಿ ಮಾಡಿ, ಗದ್ದಿಗೆ ನಿರ್ಮಿಸಿ, ಗೋಪುರ ಕಟ್ಟಿಸುತ್ತಾನೆ.

ತಿಪ್ಪಣ್ಣಯ್ಯ ಧರ್ಮಕಲ್ಯಾಣದ ಕ್ಷೇತ್ರದಲ್ಲಿ ಹಿರಿಯ ಶರಣ ಎನ್ನುವ ಅಂಶ ಸ್ವರವಚನ ಸಾಹಿತ್ಯದಲ್ಲಿ ಬಿಂಬಿತವಾಗಿದೆ. ಗುಂಡ ಬಸವಣ್ಣನಿಗೆ ಮಕ್ಕಳ ಭಾಗ್ಯ ನೀಡು ಎಂದು ಶಿವನನ್ನು ಕೇಳಿಕೊಳ್ಳುವ ಪರಿ ಈ ಕೆಳಗಿನಂತೆ ಉಲ್ಲೇಖ ಗೊಂಡಿದೆ.

ಹಿರಿಯ ತಿಪ್ಪಣ್ಣಯ್ಯ ಶರಣರ ದೇವನು
ಕರಣಮೂರ್ತಿ ತಾ
ತರಣಿ ಜಕ್ಕಾಂಬಿಕೆಗೆ ಕರ ಮುನಿಗಿದ ನೀ
ಶರಣ ಮುಟ್ಟಸೆಂದು
ಈಶ ಭಕ್ತನು ತಿಪ್ಪಣ್ಣಯ್ಯನು ಹೇಳಿ ಕೈ
ಲಾಸಕ್ಕೆ ಬಿಜಯ ಮಾಡಲು
ದೇಶದೊಳಲ್ಲಮ ರಾಯನೆಂದೆಂಬ ಮ
ಹೇಶ ತಾ ಜನಿಸಿದನು.[5]

ತಿಪ್ಪಣ್ಣಯ್ಯನನ್ನು ಶರಣರ ದೇವನು ಎಂದು ಕರೆದಿರುವುದನ್ನು ನೋಡಿದರೆ, ಗುಂಡಬಸವಣ್ಣನಂತೆ ತಿಪ್ಪಣ್ಣಯ್ಯನೂ ಸಹ ಶ್ರೇಷ್ಠತೆಯನ್ನು ಪಡೆದವನೆಂದು ತಿಳಿಯುತ್ತದೆ. ಇನ್ನೊಂದು ಸ್ವರವಚನದಲ್ಲಿ ತಿಪ್ಪಣ್ಣಯ್ಯನನ್ನು ಚಿನ್ನ, ಆನಂದ ಮೂರ್ತಿ ಎಂದು ಕರೆದಿರುವುದನ್ನು ಈ ಕೆಳಗಿನ ಉಲ್ಲೇಖದಂತೆ ಕಾಣುತ್ತೇವೆ.

ಚರಣವನು ಶರಣ ತನ್ನ
ಪಣೆಗೆಣೆಯನು ತಾತ್ತಿ
ಪ್ಪಣ್ಣಯ್ಯ ಬಸಣ್ಣ ಬಣ್ಣದೆನ್ನ
ರನ್ನ ಮೊನ್ನ ಮೊನ್ನ ವೆನ್ನ

ಚಿನ್ನ ಚಿನ್ನ ಕಣ್ಣ ತನ್ನ
ಉನ್ನತೋನ್ನತನಂಬಿರ್ದೆನ್ನ
ಶರಣ ತಿಪ್ಪಣ್ಣಯ್ಯ ತನ್ನಮನ
ದಾನಂದೊಟ್ಟ ಮನೆಯನು'

ಹೀಗೆ ತಿಪ್ಪಣ್ಣಯ್ಯನನ್ನು ಕೊಂಡಾಡಿರುವುದನ್ನು ನೋಡಿದರೆ, ಧರ್ಮಕಲ್ಯಾಣದಲ್ಲಿ ಅವನಿಗೆ ದೊರೆ ತಂಥ ಸ್ಥಾನ ಮಾನಗಳನ್ನು ಗುರುತಿಸಬಹುದಾಗಿದೆ. ತಿಪ್ಪಣ್ಣಯ್ಯನನ್ನು ಕುರಿತಂತೆ ಒಂದು ಪದ್ಯ ಸಂಪೂರ್ಣ ವಿವರಣೆ ಕೊಡುವುದನ್ನು ಕಾಣುತ್ತೇವೆ.

ಜಯತು ಪರಶಿವಮೂರ್ತಿ
ಜಯತು ಪರಬ್ರಹ್ಮವೆ
ಜಯತು ಸರ್ವಾಂಗಲಿಂಗಿಯೆ ಸಗುಣ ಶರಧಿಯೆ
ಜಯತು ಮಂಗಳಮಯನೆ
ಜಯತು ತಿಪ್ಪಣ್ಣಯ್ಯನೆ ಸ್ವಾಮಿ ಜಯತು. ||ಪ||

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ
ಮತ್ತೆ ಶರಣೈಕ್ಯನೆಂಬರು ಆರುಸ್ಥಲವೆಂದು
ಇತ್ತಲಿ ಮಹಿಮೆಯೊಳಗಾವನೆಂದೊಂದ
ಕೃತ್ಯವಿಡಬಹುದೆ, ನೋಡ
ದ ತೆರ ಧರೆಗೆ ಶರಣರ ಕಳುಹಬೇಕು ನೀ
ಭೂತಳಕೆ ಇಳಿದು ಭೂಜನಕೆಲ್ಲ ರೂಹ ಮಾಡಿ
ಪಥವನನುಮಾಡಿ ಪ್ರಥಮಥರ ಪವಾಡವ ನೋಡ
ಚಿತ್ರಸೇನಲು ಎಯ್ದಿದಾ ಸ್ವಾಮಿ ||೧||

ಮತ್ತೊಂದು ಕೇಳಿ ಭಕ್ತಿಯ ಮಾಳ್ಪ ಸಜನರು
ಸ್ತುತಿಸಿ ತಿಪ್ಪಣ್ಣಯ್ಯನ ನಾಮ ಪ್ರಥಮಾಕ್ಷರವ
ಅತ್ಯಂತ ಅವಗುಣೋರ್ಜಿಸಿ ಅವ ನೆಡೆವಂಗೆ
ಮತ್ತೆ ಸಾಲೋಕ್ಯವಿತ್ತು
ದ್ವಿತೀಯಾಕ್ಷರವ ನೆನೆಯ ಸಾಮಿಪ್ಯವೀವುದು
ತೃತಿಯಾಕ್ಷರವ ನೆನೆಯ ಸಾರೊಪ್ಯವೀವುದು
ಚತುರಾಕ್ಷರವ ನೆನೆಯ ಸಾಯುಜ್ಯ ಪದಗಳನು
ಇತ್ತು ರಕ್ಷಿಸಯ್ಯಾ ದೇವಾ ಜಯತು. ||೨||

ಪರಮ ಪುರುಷನೆ ಪರಂಜ್ಯೋತಿ ಪ್ರಕಾಶನೆ
ನಿರುಮಳಾತ್ಮಕನೆ ನಿತ್ಯಾನಂದ ಮೂರ್ತಿಯೆ
ಧಮರ ಶರಥಿಯೆ ದತೋಭೋಕ್ತ ತಿಪ್ಪಣ್ಣಯ್ಯ

ಕರುಣ ನಿಮ್ಮದು ರಕ್ಷಿಸಾ
ನರಕಂಥೆಯನೆ ತೊಟ್ಟು ಧರೆಯೊಳಗೆ ಉದಯಿಸಿರ್ದು
ಗುರು ಗುಂಡ ಬಸವೇಶ್ವರನ ಮಹಿಮೆ ಜಗದೊಳಗೆ
ಅರುಹ ಮಾಡಲಿ ಬಂದ ಆತ್ಮಲಿಂಗೈಕ್ಯ ನಿಮ್ಮ
ಚರಣಾಂಬುಜಕೆ ಶರಣು ಸ್ವಾಮಿ ಜಯತು.[೧೦] ||೩||

ಈ ಪದ್ಯದಲ್ಲಿ ತಿಪ್ಪಣ್ಣಯ್ಯನನ್ನು ದೇವತಾ ಸ್ವರೂಪವೆಂದು ಬಣ್ಣಿಸಲಾಗಿದೆ. ಪರಶಿವಮೂರ್ತಿ, ಪರಬ್ರಹ್ಮ, ಸರ್ವಾಂಗಲಿಂಗಿ ಎಂದು ಕರೆಯಲಾಗಿದ್ದು ಮಂಗಳವನ್ನು ಉಂಟುಮಾಡು ಎಂದು ಬೇಡಿಕೊಳ್ಳಲಾಗುತ್ತಿದೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಆರು ಸ್ಥಲಗಳನ್ನು ಅರಿತಿರುವಂಥ ಮಹಿಮರನ್ನು ಧರಗೆ ಕಳುಹಿಸು ಎಂದು ಮೊರೆ ಇಡಲಾಗಿದೆ.

ಭಕ್ತರು, ಸಜ್ಜನರು "ತಿಪ್ಪಣ್ಣಯ್ಯ" ಎಂಬ ನಾಲ್ಕು ಅಕ್ಷರವನ್ನು ಸ್ತುತಿಸುವುದರಿಂದ ಆಗುವ ಲಾಭಗಳನ್ನು ತಿಳಿಸಲಾಗಿದೆ. ಪ್ರಥಮಾಕ್ಷರವ ಜೀರ್ಣಸಿಕೊಂಡು ನಡೆಯುವವನಿಗೆ ಸಾಲೋಕ್ಯವೂ, ದ್ವಿತೀಯಾಕ್ಷರ ನೆನೆಯುವುದರಿಂದ ಸಾಮೀಪ್ಯವೂ, ತೃತೀಯಾಕ್ಷರವ ನೆನೆದರೆ ಸಾರೋಪ್ಯವೂ, ಚತುರ್ಥಾಕ್ಷರವ ನೆನೆದರೆ ಸಾಯುಜ್ಯ ಪದವಿ ಸಿಗುತ್ತದೆ ಎಂದು ತಿಪ್ಪಣ್ಣಯ್ಯನ ನಾಮವನ್ನು ಕುರಿತು ಸ್ತುತಿಸಲಾಗಿದೆ.

ಪದ್ಯದ ಕೊನೆಯಲ್ಲಿ ತಿಪ್ಪಣ್ಣಯ್ಯನನ್ನು ಪರಮ ಪುರುಷನೇ, ಪರಂಜ್ಯೋತಿ ಸ್ವರೂಪನೇ, ನಿರುಮಳಾತ್ಮಕನೇ, ನಿತ್ಯಾನಂದ ಮೂತಿಯೇ, ನಮ್ಮನ್ನು ರಕ್ಷಿಸು ಎಂದು ಬಿನ್ನೈಯಿಸಲಾಗಿದೆ. ಧರೆಗೆ ನೀ ಉದಿಸಿದ್ದು. "ಗುರುಗುಂಡ ಬಸವೇಶ್ವರನ ಮಹಿಮೆ ಜಗದೊಳಗೆ ಅರುಹಲು" ಎಂದು ಹೇಳಲಾಗಿದೆ. ಇಲ್ಲಿ ಗುರುಗುಂಡ ಬಸವೇಶ್ವರನ ಮಹಿಮೆಯ ಅರುಹಲು ಎಂದು ಬಂದಿರುವುದರಿಂದ ತಿಪ್ಪಣ್ಣಯ್ಯ ಗುಂಡಬಸವಣ್ಣನನ್ನು ಗುರುವೆಂದು ಸ್ವೀಕಾರ ಮಾಡಿದ್ದ ಎಂದು ತಿಳಿಯುತ್ತದೆ.

ತಿಪ್ಪಣ್ಣಯ್ಯ ಧರ್ಮಕಲ್ಯಾಣ ಪರಂಪರೆಗೆ ತನ್ನದೇ ಆದ ವಿಶಿಷ್ಟ ಸೇವೆಯನ್ನು ಸಲ್ಲಿಸಿದ್ದು, ಜನರ ಕಣ್ಣಿಗೆ ದೈವೀಪುರುಷನೆಂದು ಬಿಂಬಿತವಾಗಿರುವುದು ವಿಶೇಷವಾಗಿದೆ. ತನ್ನ ಆಚಾರ, ವಿಚಾರ ವೈಶಿಷ್ಟ್ಯಪೂರ್ಣ ನಡತೆಯಿಂದ ಪೂಜ್ಯನೀಯ ವ್ಯಕ್ತಿಯಾಗಿ ಧರ್ಮಕಲ್ಯಾಣ ಕಟ್ಟಲು ಗುಂಡಬಸವನಿಗೆ ನೆರವಾದನು ಎಂಬುದರಲ್ಲಿ ಎರಡು ಮಾತಿಲ್ಲ.

**೫.೨. ಕಕ್ಕಳಮೇಲಿಯ ಅಲ್ಲಮಪ್ರಭು**

ಇಂದಿನ ಬಿಜಾಪುರ ಜಿಲ್ಲೆಯ, ಸಿಂಧಗಿ ತಾಲೂಕು ಕೇಂದ್ರದಿಂದ ೨೦ ಕಿ.ಮೀ. ದೂರದಲ್ಲಿ ಕಕ್ಕಳಮೇಲಿ ಇದೆ. ಇಲ್ಲಿ ೧೫.೧೬ನೇ ಶತಮಾನದಿಂದ ಈಚೆಗೆ ರಚಿಸಿರಬಹುದಾದ ಎರಡು ಜೋಡಿ ಗದ್ದಿಗೆಗಳಿವೆ. ಈ ಗದ್ದಿಗೆಯ ಮೇಲೆ ಗುಮ್ಮಟ ಮಾದರಿಯ ಗೋಪುರವಿದೆ. ಸದ್ಯ ಇದು ಅಂಬಿಗರ ವಂಶದವರಿಂದ ಪೂಜೆಗೊಳ್ಳುತ್ತಿದೆ. ಈ ಜೋಡಿ ಗದ್ದಿಗೆಗಳು ಒಂದು ಅಲ್ಲಮಪ್ರಭುವಿನದೆಂದು ಮತ್ತೊಂದು ಜಕ್ಕಮ್ಮ ನದೆಂದು ಹೇಳಲಾಗುತ್ತದೆ. ಈ ಗದ್ದಿಗೆಗಳಿಗೆ ಒಂದೇ ಪ್ರದಕ್ಷಣಾ ಪಥವಿದ್ದು ಎರಡೂ ಬೇರೆ ಬೇರೆ ಗುಮ್ಮಟದ

ಗೋಪುರಗಳನ್ನು ಹೊಂದಿವೆ. ಮುಂಭಾಗದಲ್ಲಿ ಕಮಾನಿನ ಮಾದರಿಯಲ್ಲಿ ಪ್ರವೇಶದ ಬಾಗಿಲುಗಳಿದ್ದು, ಮುಂದೆ ವಿಶಾಲವಾದ ಪರಾಂಗಣವನ್ನು ಹೊಂದಿದೆ. ಅಲ್ಲಮಪ್ರಭು ಮತ್ತು ಜಕ್ಕಮ್ಮರ ಗದ್ದಿಗೆ ಪಕ್ಕದಲ್ಲಿ ಬಲಗಡೆ ಎರಡು ಸಣ್ಣ ಗದ್ದಿಗೆಗಳಿದ್ದು ಮೆಟ್ಟಿಲು ಮಾದರಿಯ ಗೋಪುರವನ್ನು ಹೊಂದಿದೆ. ಈ ಗದ್ದಿಗೆಗಳು ಯಾರವು ಎಂಬುದು ತಿಳಿದಿಲ್ಲ. ಅಲ್ಲಮಪ್ರಭು ಮತ್ತು ಜಕ್ಕಮ್ಮರ ಭಕ್ತರು ಗುಲಬರ್ಗಾ ಜಿಲ್ಲೆಯಲ್ಲಿ ಹೆಚ್ಚಾಗಿದ್ದು, ಇಂದಿಗೂ ಅಪಾರ ಸಂಖ್ಯೆಯಲ್ಲಿ ಕಕ್ಕಳಮೇಲಿಗೆ ಬಂದು ಗದ್ದಿಗೆಯ ದರ್ಶನ ಪಡೆಯುತ್ತಾರೆ. ಶ್ರಾವಣ ಮಾಸದಲ್ಲಿ ಈ ಭಕ್ತರ ಸಂಖ್ಯೆ ಹೆಚ್ಚಾಗಿರುತ್ತದೆ. ಇದೆಲ್ಲವು ಪ್ರಸ್ತುತ ಸಂದರ್ಭದಲ್ಲಿ ಕಕ್ಕಳಮೇಲಿಯಲ್ಲಿ ಇರುವ ವಸ್ತು ಚಿತ್ರಣವಾಗಿದೆ.

ಹಾಗಾದರೆ ಅಲ್ಲಮ್ಮ ಪ್ರಭು ಯಾರು? ಜಕ್ಕಮ್ಮ ಯಾರು? ಕಕ್ಕಳಮೇಲಿಯಲ್ಲಿ ನೆಲೆ ನಿಂತದ್ದೇಕೆ? ಧರ್ಮಕಲ್ಯಾಣ ಪರಂಪರೆಯನ್ನು ಹೇಗೆ ಮುಂದುವರಿಸಿದರು ಎಂದು ತಿಳಿಯುವುದು ಉಚಿತವೆನಿಸುತ್ತದೆ.

ಧರ್ಮಕಲ್ಯಾಣದ ಅಧಿಪತಿ ಎಂದು ಹೇಳಲಾಗುವ ಗುಂಡಬಸವಣ್ಣ ಮತ್ತು ಅವನ ಪತ್ನಿ ಜಕ್ಕಾಂಬೆಯ ಉದರದಲ್ಲಿ ಅಲ್ಲಮರಾಯ ಜನಿಸಿದನು ಎಂದು ಸ್ವರವಚನದಲ್ಲಿ ಈ ಕೆಳಗಿನಂತೆ ಉಲ್ಲೇಖವಾಗಿದೆ.

ಗುರು ಗುಂಡರಾಯನ ಗರ್ಭದಲಿ
ಪರಂಜ್ಯೋತಿ ಉದ್ಭವಿಸಿತೆಂದು
ಅರುಹು ಜ್ಞಾನದ ಪಿಂಡವೆಂದೆನುತ
ಅರುವಿಯನಿತ್ತನು.
ಹಿರಿಯ ತಿಪ್ಪಣ್ಣಯ್ಯ ಶರಣರ ದೇವನು
ಕರುಣಮೂರ್ತಿ ತಾ
ತರಣಿ ಜಕ್ಕಾಂಬಿಕೆಗೆ ತರ ಮುಗಿದನೀ
ಶರಣ ಮುಟ್ಟಿಸೆಂದು
ಈಶಭಕ್ತನು ತಿಪ್ಪಣ್ಣಯ್ಯನು ಹೇಳಿ ಕೈ
ಲಾಸಕ್ಕೆ ಬಿಜಯ ಮಾಡಲು
ದೇಶದೊಲಲ್ಲಮರಾಯನೆಂದೆಂಬ ಮ
ಹೇಶ ತಾ ಜನಿಸಿದ.[೧೧]

ಗುಂಡರಾಯನ ಪುತ್ರನಾಗಿ, ಪರಂಜ್ಯೋತಿ ಸ್ವರೂಪನಾದ ಅಲ್ಲಮಯ್ಯನು ಜನಿಸುವುದಕ್ಕಿಂತ ಪೂರ್ವದಲ್ಲಿ ತಿಪ್ಪಣ್ಣಯ್ಯ ಜಕ್ಕಾಂಬೆಗೆ ಕೈ ಮುಗಿದು ಜ್ಞಾನಿಯಾಗಿರುವ ಶರಣನನ್ನು ನೀಡು ಎಂದು ಬೇಡಿಕೊಳ್ಳುತ್ತಾನೆ. ಈಶ್ವರನ ಭಕ್ತನಾಗಿದ್ದ ತಿಪ್ಪಣ್ಣಯ್ಯನ ಮಾತನ್ನು ಶಿವ ಕೇಳಿ ಗುಂಡಬಸವಣ್ಣ ಮತ್ತು ಜಕ್ಕಾಂಬೆಯ ಉದರದಲ್ಲಿ ಹುಟ್ಟಿಬರುತ್ತಾನೆ. ಅವನೇ ಅಲ್ಲಮಪ್ರಭು. ಅಲ್ಲಮಪ್ರಭುವನ್ನು, ಅಲ್ಲಮಯ್ಯ, ಅಲ್ಲಮ, ಅಲ್ಲಮರಾಯ ಎಂದು ಕರೆದಿರುವುದನ್ನು ಕಾಣುತ್ತೇವೆ.

ನಾಗಾವಿಯಲ್ಲಿ ಗುಂಡಬಸವಣ್ಣನ ಮಗನಾಗಿ ಜನಿಸಿದ ಅಲ್ಲಮಪ್ರಭು ಕಕ್ಕಳಮೇಲಿಯಲ್ಲಿ ಮಠವನ್ನು ಸ್ಥಾಪಿಸಿದ ಎನ್ನುವುದಕ್ಕೆ ಹಲವು ಆಧಾರಗಳಿವೆ. ಕಕ್ಕಳಮೇಲಿಯಲ್ಲಿ ಅಲ್ಲಮಪ್ರಭು ಮತ್ತು ಜಕ್ಕಮ್ಮನ ಗದಿಗೆಗಳು

ಇಂದಿಗೂ ಇವೆ. ಅಲ್ಲಮಪ್ರಭುವಿನ ಭಕ್ತರು ಗುಲಬರ್ಗಾ ಜಿಲ್ಲೆಯ ನಾಗಾವಿ ಪ್ರದೇಶದಿಂದ ಇಂದಿಗೂ ಕಕ್ಕಳಮೇಲಿಗೆ ಬರುತ್ತಾರೆ. ಎಲ್ಲಕ್ಕೂ ಮುಖ್ಯವಾಗಿ ನಮ್ಮ ಅಧ್ಯಯನದ ಮುಖ್ಯ ಆಕರವಾದ ಗುಂಡಬಸವೇಶ್ವರ ಚರಿತ್ರೆಯ' ಹಸ್ತಪ್ರತಿಯನ್ನು ಬರೆಯಿಸಿದವನು "ಕಕ್ಕಳಮೇಲಿಯ ಮಠದ ಅಲ್ಲಮಪ್ರಭು ದೇವರ ವರಪುತ್ರ ಗದ್ದಿಗೆ ರಾಯನ ಸೋದರಳಿಯನು ಬರಸಿದನು ಪ್ರಭಯ್ಯನು."[೧೨] ಎಂದು ಇರುವುದರಿಂದ ಕಕ್ಕಳಮೇಲಿಯಲ್ಲಿ ಅಲ್ಲಮಪ್ರಭು ಮಠವನ್ನು ಕಟ್ಟಿ 'ಧರ್ಮಕಲ್ಯಾಣ' ಪರಂಪರೆಯನ್ನು ಮುಂದುವರಿಸಿದನೆಂದು ಹೇಳಬಹುದು.

ಸ್ವರವಚನ ಸಾಹಿತ್ಯದಲ್ಲಿ ಉಲ್ಲೇಖವಾಗಿರುವಂತೆ ಅಲ್ಲಮನನ್ನು ಇಡಿಯಾಗಿ ಒಂದು ಪದ್ಯದಲ್ಲಿ ಅವನ ವ್ಯಕ್ತಿತ್ವ, ಧರ್ಮಕಲ್ಯಾಣದ ರೂವಾರಿಯಾದ ಚಿತ್ರಣವನ್ನು ಕಟ್ಟಿಕೊಡಲಾಗಿದೆ.

ರೂಪಿಡಳವಲ್ಲ ರೂಢಿಗಧಿಕ ಸ್ವಾಮಿ
ಏಪರಿ ಸ್ತುತಿಸುವೆನಲ್ಲಮಲಿಂಗ ಭಾಪುರೆ
ಲೋಕವಿವೇಕವ ರಕ್ಷಿಸಿ ಸಾಕುವ
ನಾಲ್ಕೊಂದು ಮುಖದೇವನೆ
ಏಕಮುಖದ ಗುಂಡರಾಯನ ಪುತ್ರನ
ವಾಡದವೆನ್ನಳವೆ ಅಲ್ಲಮಲಿಂಗ
ಜ್ಯೋತಿಯಲಾದ ಜಾತಿಯದಕೆ
ಮಾತ ಬಣ್ಣಪರೆ
ಆತ ಧರ್ಮಕಲ್ಯಾಣೆಯ ತನುಜ
ಈತ ಬಡವನೆ ಅಲ್ಲಮ ಲಿಂಗ[೧೩]

ಏಳು ಲೋಕಗಳನ್ನು ರಕ್ಷಿಸಿ ಸಾಕುತ್ತಿರುವಂತಹ ನಾಲ್ಕೊಂದು ಮುಖದ ಶಿವನೆನಿಸಿರುವ ಅಲ್ಲಮನು, ಶಿವನ ಏಕಮುಖದ ಅವತಾರಿ ಪುರುಷನೆನಿಸಿದ ಗುಂಡರಾಯನ ಪುತ್ರ ಎಂದು ಸ್ತುತಿಸಲಾಗಿದೆ. ಜಗವನ್ನು ಬೆಳಗಲು ಬಂದಿರುವಂತ ಜ್ಯೋತಿ ಈ ಅಲ್ಲಮ, ಅವನಿಗೆ ಜಾತಿ ಎಂಬುದು ಇಲ್ಲ, ಅವನು ಧರ್ಮಕಲ್ಯಾಣದ ಪುತ್ರ, ಅವನಿಗೆ ಬಡತನವೆಂಬುದು ಇಲ್ಲಿ ಎಂದು ಹೇಳಿರುವುದನ್ನು ನೋಡಿದಾಗ, ಧರ್ಮಕಲ್ಯಾಣವನ್ನು ಬೆಳೆಸಲು ಬಂದಿರುವ ವ್ಯಕ್ತಿ ಇವನಾಗಿದ್ದಾನೆ ಎಂದು ತಿಳಿಯಬಹುದು.

ಅಲ್ಲಮಪ್ರಭು ಧರ್ಮಕಲ್ಯಾಣದ ಪ್ರದೇಶಕ್ಕೆ ಬಸವಕಲ್ಯಾಣದ ೧೨ನೇ ಶತಮಾನದ ಪರಿವಾದದೊಂದಿಗೆ ಬಂದ ಎಂದು ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

ಅಲ್ಲಿ ಬಂದಿದ್ದರು ಕಲ್ಯಾಣಪುರದೊಳ
ಗೆಲ್ಲ ಜಗವರಿಯೆ
ಬಲ್ಲಿದ ಬಸವಣ್ಣ ಚೆನ್ನಬಸವನೆಂಬ
ಬೆಲ್ಲದ ನಾಮದಲಿ ಅಲ್ಲಮಲಿಂಗ
ಏಳುನೂರೆಪ್ಪ ತಕೆ ಬರುತೀವೆ ಎಂದು
ಹೇಳಿ ಹೋಗಿದ್ದುದಕೆ

ಮೇಳುರಿ ಬಂದರು ಧರ್ಮಕಲ್ಯಾಣಕ್ಕೆ

ಕೇಳಿರೆಲ್ಲ ಜನರು ಅಲ್ಲಮಲಿಂಗ[೧೪]

೧೨ನೆಯ ಶತಮಾನದ ಬಸವ ಕಲ್ಯಾಣದ ಬಸವಣ್ಣ ಚೆನ್ನಬಸವಣ್ಣನ ಸಮೇತವಾಗಿ ಧರ್ಮಕಲ್ಯಾಣಕ್ಕೆ ಬಂದರೆಂದು ತಿಳಿಸಲಾಗಿದೆ. ಹಿಂದೆ ಏಳುನೂರೆಪ್ಪತ್ತಕ್ಕೆ[೧೫] ಬರುತೇವೆಂದು ಹೇಳಿದ್ದಕ್ಕೆ ಈಗ ಕಲ್ಯಾಣದ ಪರಿವಾರ ಸಮೇತವಾಗಿ ಅಲ್ಲಮ ಧರ್ಮಕಲ್ಯಾಣಕ್ಕೆ ಬಂದ ಎಂದು ಉಲ್ಲೇಖಿತವಾಗಿದೆ.

ಭಕ್ತರ ಮನವನ್ನು ಗೆದ್ದು ಅಲ್ಲಮರಾಯ ಜ್ಞಾನ ಉಳ್ಳಂಥ ಧ್ಯಾನಿಗಳಿಗೆ ಮಾರ್ಗ ನೀಡುವ ಗುರುವಾಗಿ ನಿಲ್ಲುತ್ತಾನೆ. ಸದಾ ಆನಂದದಲ್ಲಿ ಇಡುತ್ತಿದ್ದ ಧರ್ಮಕಲ್ಯಾಣದಲ್ಲಿ ಹೊನ್ನಿನ ರಾಜ್ಯವನ್ನು ನಿರ್ಮಿಸಿದ ಎಂದು ಭಕ್ತರು ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲಮನ ನೆನೆದರೆ ಭವ ತೀರುವುದು ಎಂದು ನಂಬಿದ್ದರ ಉಲ್ಲೇಖ ಇಂತಿದೆ.

ಆನಂದದ ಮೇಲೆ ಆನಂದಗಳ

ನೇನೆ ಪೇಳುವೆನು

ಜ್ಞಾನವುಳ್ಳಂಥ ಧ್ಯಾನಿಗಳಿಗೆ

ಮಾನ್ಯ ದುರ್ಗಗಳು

ಕೊಂಡಾಡಲಳವೆ ಗುರುಗುಂಡರಾಯನ ಪುತ್ರ ಮಂಡಲ ಕಧಿಕನ

ದಂಡ್ಯಾಗಿ ನೆನೆಯೆ ಪ್ರಚಂಡನಲ್ಲಮರಾಯನ

ಖಂಡಿತ ಭವ ತಿಮಿರ.[೧೬]

ಹೀಗೆ ಭಕ್ತರ ಭವರೋಗವನ್ನು ಕಳೆಯುವಂತೆ ಅಲ್ಲಮರಾಯ ಧರ್ಮಕಲ್ಯಾಣದ ನಾಗಾವಿಯಿಂದ ಕಕ್ಕಳಮೇಲಿಗೆ ಹೋದ ಕಾರಣ ಗೊತ್ತಾಗಿಲ್ಲ. ಆದರೆ ಕಕ್ಕಳಮೇಲಿಯಲ್ಲಿ ಮಠವನ್ನು ಸ್ಥಾಪಿಸಿದ್ದನ್ನು ನೋಡಿದರೆ, ನಾಗಾವಿಯಂತೆ ಕಕ್ಕಳಮೇಲಿಯ ಪ್ರದೇಶದಲ್ಲಿ ಧರ್ಮಕಲ್ಯಾಣ ಪರಂಪರೆಯನ್ನು ಮುಂದುವರಿಸಿದರೆಂದು ತಿಳಿಯಬಹುದು.

ಅಲ್ಲಮನು ತಂದೆ ಗುಂಡಬಸವನ ಮಹಿಮೆಯನ್ನು ಸಾರಲು ಬಂದವನು ಎಂದು ಕೆಲವು ಸ್ವರ ವಚನಗಳಲ್ಲಿ ಉಲ್ಲೇಖವಿದೆ.

ಉರಿ ಅಡವಿಯೊಳಗೇಳೆ ಅಡವಿ ತಾ ಗುರಿಯಹುದು

ಶರೀರದವಧಿಗೆ ಶರೀರ ಗುರಿಯಹುದು

ಶರಣ ನೊಂದರೆ ನಿಂದೆಯಾಡಿದವ ಗುರಿಯಹ

ಸಿರಿಯ ಮದದಿಂ ಕೋ ಬಾಡಬಹುದೆ.

ವರವಸ್ತು ಗುರು ಗುಂಡ ಬಸವೇಶ್ವರನ

ಮಹಿಮೆಪ್ರಭೆ ಮಾಡಬಂದ ಅಲ್ಲಮ ಲಿಂಗನ

ಹರಣ ಮಾರಾಹುತಿಗೆ ಸಂಚಕಾರವು.[೧೭]

ಇಲ್ಲಿ ಶರಣರು ನರಮನುಷ್ಯರ ಸಮಾನರಲ್ಲ, ಅವರು ದೈವೀ ಪುರುಷರು, ಶರಣರಿಗೆ ನೋವು ಉಂಟಾದರೆ ನೋವು ಕೊಟ್ಟವರಿಗೆ ಕೇಡಾಗುತ್ತದೆ ಎಂದು ಹೇಳಲಾಗಿದೆ. ಗುಂಡಬಸವೇಶ್ವರನ ಮಹಿಮೆಯನ್ನು ಹೇಳಲು

ಅಲ್ಲಮನು ಬಂದಿರುವನು ಎನ್ನುವುದನ್ನು ನೋಡಬಹುದು. ಗುಂಡಬಸವನ ಮಹಿಮೆ ನಾಗಾವಿಯಲ್ಲಿ ಅಷ್ಟೇ ಅಲ್ಲದೆ ಬೇರೆ ಕಡೆ ಹಬ್ಬಲಿ, ಭಕ್ತರಿಗೆ ಪ್ರಯೋಜನವಾಗಲಿ ಗುಂಡಬಸವನ ತತ್ವ ಬೋಧೆ ಎಲ್ಲೆಡೆ ಹಬ್ಬಲಿ ಎಂಬ ಕಾರಣದಿಂದ ಕಕ್ಕಳಮೇಲಿಯಲ್ಲಿ ನೆಲೆ ನಿಂತು ಮಠವನ್ನು ಕಟ್ಟಿದನೆಂದು ಹೇಳಬಹುದು.

ಸ್ವರವಚನದ ಕೊನೆಯ ಪದ್ಯ ವಸಂತನಾಡ ಬನ್ನಿ ಎನ್ನುವುದರಲ್ಲಿ ಕಕ್ಕಳಮೇಲಿಯಲ್ಲಿ ಅಲ್ಲಮ ನೆಲೆನಿಂದ ಬಗೆಯನ್ನು ವಿವರಿಸಲಾಗಿದೆ.

ಅಲ್ಲಮ ಪ್ರಭುವನೆ ಪೊಗಳುತ ನೀ
ವೆಲ್ಲರು ವಸಂತನಾಡಬನ್ನಿ.
ಸೃಷ್ಟಿಗದಿತವೆಂದು ಕಕ್ಕಯನ ಯಳಮೇಲಿ
ದೃಷ್ಟಮೂರುತಿ ಅಲ್ಲಮ ಪ್ರಭು
ಕೊಟ್ಟನು ಸಂಗನ ಸುತಗೆ ವರಗಳ ಮನ
ಮುಟ್ಟಿ ವಸಂತನಾಡಬನ್ನಿ ಅಲ್ಲಮ.[೧೬]

ಹೀಗೆ ಅಲ್ಲಮನು ಸೃಷ್ಟಿಗೆ ಅಧಿಕವೆಂದು, ಧಾರ್ಮಿಕ ತಾಣವೆಂದು ಹೆಸರುವಾಸಿಯಾಗುವಂತಹ ಕುರುಹುಗಳನ್ನು ಹಿಡಿದು ನಿಶ್ಚಲ ಮೂರ್ತಿಯಾಗಿರುವಂತಹ ಅಲ್ಲಮ ಕಕ್ಕಳಮೇಲಿಯಲ್ಲಿ ಮಠವನ್ನು ಕಟ್ಟಿದ ಎನ್ನುವ ಅಂಶಗಳನ್ನು ನೋಡಬಹುದು.

ಕಕ್ಕಳಮೇಲಿಯಲ್ಲಿ ಇರುವ ಅಲ್ಲಮನ ಗುಡಿಯು ಅತ್ಯಂತ ಪ್ರಾಚೀನವೆಂದು ಅಲ್ಲಿಯ ಜನರು ಅಭಿಪ್ರಾಯಪಡುತ್ತಾರೆ. ಇತ್ತೀಚೆಗೆ ೧೮-೧೯ನೇ ಶತಮಾನದಲ್ಲಿ ಲಚ್ಚಾಣದ ಸಿದ್ಧರಾಮೇಶ್ವರ ದೇವಾಲಯವು ಹೆಸರುವಾಸಿಯಾಗಿದ್ದು, ಪಾಂಚಾಳರ ಆರಾಧ್ಯ ದೈವವೆಂದು ಪ್ರತಿನಿತ್ಯ ಪೂಜೆ ನಡೆಸುತ್ತಿದ್ದಾರೆ. ಪ್ರತಿ ಹುಣ್ಣಿಮೆ ಮತ್ತು ಅಮಾವಾಸ್ಯೆಯಂದು ಹೆಚ್ಚಿನ ಭಕ್ತರು ಆಗಮಿಸುತ್ತಿದ್ದು ಅನ್ನದಾಸೋಹ ವ್ಯವಸ್ಥೆ ಇರುತ್ತದೆ.

**೫.೩. ನಾಗಾವಿಯ ಈರಪ್ಪಯ್ಯ**

ಈರಪ್ಪಯ್ಯನ ಚಾರಿತ್ರಿಕ ವಿವರಗಳ ಬಗೆಗೆ ಅನೇಕ ತೊಡಕುಗಳಿದ್ದು ನಿಖರವಾದ ಆಧಾರವೆಂದರೆ, ನಾಗಾವಿಯಲ್ಲಿರುವ ''ಗದ್ದಿಗೆ''ಮಾತ್ರ ನಾಗಾವಿಯಲ್ಲಿ ಈರಪ್ಪಯ್ಯನ ಗದ್ದಿಗೆಯನ್ನು ಒಳಗೊಂಡಂತೆ ಗುಮ್ಮಟಮಾದರಿಯ ಗೋಪುರದಿಂದ ಸುಂದರವಾದ ಗುಡಿಯನ್ನು ನಿರ್ಮಾಣ ಮಾಡಲಾಗಿದೆ. ಈ ಗುಡಿಯ ಆದಾರದಿಂದ ಈರಪ್ಪಯ್ಯ ಧರ್ಮಕಲ್ಯಾಣ ಪರಿಸರದಲ್ಲಿ ಬೆಳೆದ ವ್ಯಕ್ತಿ ಎಂಬುದು ಸ್ಪಷ್ಟವಾಗುತ್ತದೆ. ಹಿಂದೆ ಚರ್ಚಿಸಿದಂತೆ ಈರಪಯ್ಯ ಗುಂಡಬಸವಣ್ಣನ ಮಗನಾಗಿದ್ದು, ಕೊಡೇಕಲ್ಲ ಬಸವಣ್ಣನ ಶಿಷ್ಯನೂ ಆಗಿದ್ದಾನೆ. ಈರಪ್ಪಯ್ಯ ಸಾಹಿತ್ಯ ರಚನೆಯನ್ನು ಮಾಡಿದ್ದು ಒಮ್ಮೆ ಮಾತ್ರ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ.[೧೭] ನಾಗಾವಿಯ ಶರಣ ''ಗುಂಡಬಸಪ್ಪ''ನ ಅಂಕಿತದಲ್ಲಿ ಸ್ವರವಚನಗಳನ್ನು ರಚಿಸಿದವನು ಇವನೇ ಎನ್ನುವುದು ನಿಖರವಾಗಿ ತಿಳಿಯಬೇಕಾಗಿದೆ. ಅದೇನೆ ಇದ್ದರೂ ಈರಪ್ಪಯ್ಯ ಗುಂಡಬಸವೇಶ್ವರನ ಶಿಷ್ಯನಾಗಿಯೂ, ಮಗನಾಗಿಯೂ, ಧರ್ಮಕಲ್ಯಾಣ ಪರಂಪರೆಯನ್ನು ಮುಂದುವರಿಸಿದನೆಂದು ಹೇಳಬಹುದು.

ಈರಪ್ಪಯ್ಯನ ಸಾಹಿತ್ಯರಚನೆ ಹಿಂದಿನ ಕಲ್ಯಾಣ ಪರಂಪರೆಯ ಸಾಹಿತ್ಯಕ್ಕಿಂತ ಭಿನ್ನವಾಗಿದೆ. ಸಮಯಕಲ್ಯಾಣದಲ್ಲಿ ವಚನ ಸಾಹಿತ್ಯ, ವಿಜಯ ಕಲ್ಯಾಣದಲ್ಲಿ ಷಟ್ಪದಿ ಸಾಹಿತ್ಯ ಪ್ರಾಮುಖ್ಯತೆಯನ್ನು ಪಡೆದಂತೆ, ಧರ್ಮಕಲ್ಯಾಣದ ಸಾಹಿತ್ಯದಲ್ಲಿ ಸ್ವರವಚನ ಸಾಹಿತ್ಯ ಮತ್ತು ಡಂಗುರ ಪದ ಸಾಹಿತ್ಯ ಪ್ರಾಮುಖ್ಯತೆಯನ್ನು ಪಡೆದಿವೆ. ಈರಪ್ಪಯ್ಯ ರಚಿಸಿದನೆಂದು ಹೇಳಲಾಗುವ ಈ ಸ್ವರವಚನ ಸಾಹಿತ್ಯ ಮತ್ತು ಡಂಗುರ ಪದ ಸಾಹಿತ್ಯದಲ್ಲಿ ಧರ್ಮಕಲ್ಯಾಣ ಸ್ಥಾಪಕನಾದ ಗುಂಡಬಸವನ ಸ್ತುತಿಪರ ಪದ್ಯಗಳು ಬಹಳಷ್ಟು ಇವೆ. "ಇಲ್ಲಿ ಗುಂಡಬಸವನ ಸ್ತುತಿಪರ ಪದ್ಯಗಳು ಧರ್ಮಕಲ್ಯಾಣ ಪುರಾಧೀಶ ಎಂತೆಲ್ಲವು ಕರೆದಿರುವದು ಇವನನ್ನು ದೈವೀಪುರುಷ ಎಂದು ಸಾರಿ ಹೇಳುತ್ತದೆ."[೧೯]

### ೫.೩.೧. ಸ್ವರವಚನ ಸಾಹಿತ್ಯ

ಕನ್ನಡ ನಾಡಿನ ಅನುಭವಿಗಳು, ಶಿವಶರಣರು ಧರ್ಮಬೋಧೆ, ನೀತಿಬೋಧೆ, ಗುರುಸ್ತುತಿಗಳ ಅಭಿವ್ಯಕ್ತಿಗಾಗಿ 'ಸ್ವರವಚನ' ಸಾಹಿತ್ಯ ಪ್ರಕಾರವನ್ನೇ ಮಾಧ್ಯಮವನ್ನಾಗಿ ಹೆಚ್ಚಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. "ತಾವು ಹೇಳುವ ಸಂಗತಿಗಳು ಸಮಾಜದ ತಳಪಾಯದಂತಿರುವ ಜನಸಾಮಾನ್ಯರಿಗೆ ತಿಳಿಯಬೇಕಾಗಿರುವುದರಿಂದ ಅವರಿಗೆ ಅರ್ಥವಾಗುವ ಭಾಷೆ-ರೀತಿಗಳಲ್ಲಿ ಈ ಸ್ವರವಚನಗಳನ್ನು ರಚಿಸಿದರು. ಇದು ತೀರ ಸಹಜವೆನಿಸುತ್ತದೆ. ಇವುಗಳನ್ನು ತಾವೂ ಹಾಡಿ, ಇತರರೂ ಹಾಡಲು ಅನುಕೂಲವಾಗುವಂತೆ ಇವುಗಳಿಗೆ ರಾಗ, ತಾಳಗಳನ್ನು ಗುರುತಿಸಿ ಸರಳಗೊಳಿಸಿದರು."[೨೦] ಈರಪ್ಪಯ್ಯ ರಚಿಸಿದನೆನ್ನಲಾಗುವ ಈ ಸ್ವರವಚನ ಸಾಹಿತ್ಯದ ಪ್ರಮುಖ ಅಂಶಗಳು ಈ ಕೆಳಗಿನಂತಿವೆ.

ಗುರುಸ್ತುತಿ,

ಸಮಾಜ ವಿಮರ್ಶೆ,

ಧಾರ್ಮಿಕ ಚಿಂತನೆ,

ನೀತಿಬೋಧೆ,

**ಗುರುಸ್ತುತಿ**

ಸ್ವರವಚನದ ಈ ಸಾಹಿತ್ಯದಲ್ಲಿ ಒಟ್ಟು ೬೩ ಪದ್ಯಗಳಿದ್ದು ಬಹುತೇಕ ಎಲ್ಲ ಪದ್ಯಗಳ ಅಂತ್ಯದಲ್ಲಿ ಗುರುಸ್ತುತಿಯನ್ನು ಕಾಣುತ್ತೇವೆ.

ಇಲ್ಲಿ ಗುರುಗುಂಡನನ್ನು 'ಸಿದ್ಧ', 'ಶಿವಯೋಗಿ', 'ಗದ್ದಿಗೆರಾಯ', 'ಧರ್ಮಪುರಾಧೀಶ ಎಂದು ಕರೆದಿರುವುದು ವಿಶೇಷವಾಗಿದೆ. ಈ ಸ್ವರವಚನಗಳನ್ನು ನಾನು ಗುರುಗುಂಡ ಬಸವನ ಕೃಪೆಯಲಿ ಬರೆದಿರುವೆ ಎನ್ನುವಂತ ಮಾತುಗಳು ಈ ಕೆಳಗಿನಂತೆ ಉಲ್ಲೇಖವಾಗಿದೆ.

ನಾ ಪೇಳಿದವನಲ್ಲ ಸಖಿ ನನಗೆಲ್ಲಿಯದು
ನೀ ಪೇಳಿಸಲು ನಿಮ್ಮ ಕರುಣದಿಂದ

ನಾ ಪೇಳ್ವೆ ಗುರು ಗುಂಡ ಬಸವ ಕೃಪೆಯಲಿ ಸಲಹು
ನೀ ಪರಾಪರ ವಸ್ತು ಪರಬ್ರಹ್ಮವು.[೫]

ಈ ಪದ್ಯವನ್ನು ಅವಲೋಕಿಸಿದರೆ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾ ಮಂಜರಿ'ಯಲ್ಲಿ ವೀರನಾರಾಯಣನೆ ಕವಿ, ನಾನು ಕೇವಲ ಲಿಪಿಕಾರ ಎಂಬ ಮಾತನ್ನು ನೆನಪಿಗೆ ತರುತ್ತದೆ. ಗುರುಗುಂಡ ಬಸವನು ಹೇಳಿಸಿದಂತೆ ಅವನ ಕರುಣೆಯಿಂದ ನಾನು ಹೇಳಿದೆ. ನೀನೇ ಪರಬ್ರಹ್ಮ ನಮ್ಮನ್ನು ಸಲಹು ಎಂದು ಹೇಳುತ್ತಾನೆ.

ಗುರುವೆ ನಿನ್ನಬಿಟ್ಟು ನನಗೆ ಯಾರೂ ಗತಿಯಿಲ್ಲ ನನ್ನನ್ನು ಸರಿಯಾದ ಮಾರ್ಗಕ್ಕೆ ನಡೆಸು. ಪಂಚೇಂದ್ರಿಯದ ಇಚ್ಚೆಗೆ ಮನಸ್ಸನ್ನು ಹರಿಬಿಟ್ಟು ಧೃತಿಗೆಟ್ಟಿದ್ದಾನೆ ಈ ನರಕುರಿಯಾದ ನಡೆ ಹೀನ ಮಾನವ ಎಂದು ಒಂದು ಪದ್ಯದಲ್ಲಿ ಹೀಗೆ ಹೇಳಲಾಗಿದೆ.

ಗುರುರಾಯ ಗುಂಡೇಶ ಪರಮಭಕ್ತಿಯ ಪೇಳೆ
ನರಗುರಿ ನಡೆಹೀನ ನಡೆಯಬರಿಯದೆ ಕೆಟ್ಟೆ
ದುರುಳ ಪಂಚೇಂದ್ರಿಯಿಚ್ಚಿಗೆ ಹರಿದು
ಧೃತಿಗೆಟ್ಟೆ ಹರಹರ ಮಹಾದೇವನೆ ತ್ರಾಹಿಮಾಂಗುರುವೆ.[೬]

ಹೀನ ಮನುಷ್ಯನನ್ನು ನರ ರೂಪಕುರಿ ಎಂದು ಹೇಳಿ ಅಂತವರನ್ನು ಸರಿದಾರಿಗೆ ತರುವಂತೆ ಗುರುವಿನಲ್ಲಿ ಬೇಡಿಕೊಂಡಿದ್ದಾನೆ.

ಒಂದು ನಿಮಿಷದ ಸುಖಕೆ ಆಸೆಪಟ್ಟು ಭವರೋಗದೊಳು ಬೀಳಬೇಡ ಎಂದು ಮನಸ್ಸಿಗೆ ಹೇಳಿ ತನ್ನನ್ನು ಸರಿದಾರಿಯಲ್ಲಿ ನಡೆಯುವಂತೆ ಮಾಡು ಎಂದು ಗುರುವನ್ನು ಕೇಳಿಕೊಳ್ಳುವ ಪದ್ಯ. ಈ ಕೆಳಗಿನಂತೆ ಉಲ್ಲೇಖವಾಗಿದೆ.

ಒಂದು ನಿಮಿಷದ ಸುಖಕೆ ಸಿಕ್ಕಿ ಹಲವು ಪರಿಯ
ನೊಂದುಭವದೊಳು ಬೀಳದಿರು ಕೇಳು ಮನವೆ ನೀ
ಮುಂದೆ ಶ್ರೀ ಗುರು ಚರಣಕೊಂದನೆಯ ಮಾಡಿ
ನಿಜದಂದಲಿರುತಿಹುದು ಅನವರತ[೭]

ಮನುಷ್ಯ ಬಹುಬೇಗ ದಾರಿ ತಪ್ಪುವುದು ದೇಹದ ಸುಖಕ್ಕೆ ಆಸೆಯನ್ನು ಪಟ್ಟು. ಆ ಒಂದು ನಿಮಿಷದ ಸುಖಕ್ಕೆ ಸಿಕ್ಕು ಕಾಮಿತನಾಗಿ ಹಾಳಾಗದೆ, ಸರಿಯಾದ ದಾರಿಯಲ್ಲಿ ನಡೆಯುವಂತೆ ಮಾಡು ಎಂದು ಮನಸ್ಸಿಗೆ ಬುದ್ಧಿನ ನೀಡೆಂದು ಗುರುವನ್ನು ಕೇಳುತ್ತಾನೆ. ಈ ಪದ್ಯದಲ್ಲಿ ಒಂದು ನಿಮಿಷದ ಆ ಸುಖದ ಆಸೆ ಭವದಲ್ಲಿ ಬೀಳುವಂತೆ ಮಾಡುತ್ತದೆ. ಮನಸ್ಸು ಆ ಕಡೆಗೆ ಬಾರದಂತೆ ಮಾಡು ಗುರುವೇ ನಿನ್ನ ಚರಣಕೆ ವಂದನೆಯನ್ನು ಮಾಡುವೆ ಎಂದು ಗುರುವನ್ನು ಸ್ತುತಿ ಮಾಡುವುದನ್ನು ಈ ಪದ್ಯದಲ್ಲಿ ಕಾಣುತ್ತೇವೆ.

ಶಿಷ್ಯನ ಹಣೆಯ ಬರಹವನ್ನು ಗುರುವಾದವನು ಬರೆಯುತ್ತಾನೆ ಎಂದು ಒಂದು ಪದ್ಯದಲ್ಲಿ ಉಲ್ಲೇಖಿಸಲಾಗಿದೆ. ಭವರೋಗದಲಿ ಬಿದ್ದು ಒದ್ದಾಡಿ ಬರುವಂತೆ ಮಾನವರ ಹಣೆಬರಹ ಗುರುವಿನ ಕೈಯಿಂದ ಬರೆಯಲ್ಪಡುತ್ತದೆ. ಗುರು ತೋರಿಸದ ಹೊರತು ಮುಕ್ತಿಯ ಮಾರ್ಗ ದೊರೆಯುವುದಿಲ್ಲ ಎಂದು ತಿಳಿಸಿದಂತಿದೆ ಈ ಕೆಳಗಿನ ಪದ್ಯ.

ಧರೆಯ ತಿರುಗಲು ಶರಧಿಯ ದಾಟಿ ಹೋಗಲು
ಹಿರಿದುದ್ಯಮವ ಮಾಡಲು ನಿಲ್ಲದೆ ನಿಲ್ಲದೆ
ಹಿಂರಿದ್ಯಮವ ಮಾಡಲು
ಗುರುಗುಂಡರಾಯನ ಸ್ವಾಮಿ ಸಂಗಮೇಶ
ಬರೆದ ಬರೆದಪ್ಪ ಕಂಡ ಹಣೆಯಲಿ ಹಣೆಯಲಿ
ಬರೆದ ಬರೆದಷ್ಟ ಕಂಡ”

ಈ ಪದ್ಯದಲ್ಲಿ ಗುರುಗುಂಡಬಸವೇಶ್ವರನ ಗುರುವಾದ ಸಂಗಮೇಶ್ವರನನ್ನೂ ಸಹ ನೆನೆಯಲಾಗಿದೆ. ಸಂಗಮೇಶ್ವರನು ಹಣೆಯಲಿ ಬರೆದಂತೆ ಎಷ್ಟು ಬೇಕು ಅಷ್ಟು ಬಿಂಬ ಉದ್ಯಮದಲ್ಲಿ ಎಂಬ ವಾಚ್ಯಾರ್ಥದಲ್ಲಿ, ಗುರು ಮಹಿಮೆ, ಗುರುಕರಣೆಯನ್ನು ಬಿಂಬಿಸಲಾಗಿದೆ. ಯಾವುದೇ ಕೆಲಸವಾಗಲಿ ಅದಕ್ಕೆ ಸನ್ಮಾರ್ಗದತ್ತ ನಡೆಸುವ ಗುರುವಿನ ಕರುಣೆ ಬೇಕಾಗುತ್ತದೆ ಎಂಬ ಅಂಶ ಇಲ್ಲಿ ಬಿಂಬಿತವಾಗಿದೆ.

ಗುರುವಿನ ನೆರಳಾಗಿ ಸದಾ ಅವನ ಹಿಂದೆಯೇ ಇರು ಎಂದು ಮನಸ್ಸಿಗೆ ಹೇಳುತ್ತಾ ಉದಾಹರಣೆಯನ್ನು ನೀಡುವ ರೀತಿ ಅತ್ಯಂತ ಸೂಕ್ತವೆಂದೆನಿಸುತ್ತದೆ. ಕೋಳಿಯ ಮರಿಗಳು ತಾಯಿಯ ಹಿಂದೆ ಹಿಂಡುಗಟ್ಟಿ ಹೋಗುವಂತೆ, ಗುರುವಿನ ಹಿಂದೆ ಇರು ಎಂದು ಹೇಳುವ ರೀತಿ ಈ ಕೆಳಗಿನಂತಿದೆ.

ಕೋಳಿಯ ಮರಿಗಳು ತಾಯಿ ಹಿಂದುಗೊಂಡು
ಮೇಳದಿವಿಸಿ ತಿರಗುತಿರಲು ಬಿಡದೆ ಬಿಡದೆ
ಮೇಳದಿವಿಸಿ ತಿರುಗುತಿರಲು
ಕಾಳುಜೀವನ ಕಾಲು ಕೆದರಿ ಮೇಸುತಲಿಹುದು
ಭಾಳಲೋಚನ ಹೀನವೆ ಅದರಿಂದ ಅದರಿಂದ
ಭಾಳಲೋಚನ ಹೀನವೆ
ತಾಯಿಧ್ಯಾನದಲಿ ಮರಿ ಬಾಯಿಬಿಟ್ಟಿರಲು
ಸಾಹಸದಿಂದ ಗುಟುಕು ತಂದು ತಂದು.”

ಕೋಳಿಯ ಮರಿಗಳು ತಾಯಿಯ ಹಿಂದುಗಡೆ ಹಿಂಡುಗಟ್ಟಿ ತಿರುಗುವಂತೆ, ಗುರುವಿನ ಜೊತೆ ಇರಬೇಕು ಕೋಳಿಯು ಕಾಲು ಕೆದ ಕೆದರಿ ಕಾಳು ಆರಿಸುವ ಪರಿ ಗುರುವಿನಿಂದ ವಿಷಯಗಳನ್ನು ಅರಿಯಬೇಕು, ಎಂಬ ಲಕ್ಷಾರ್ಥಕೊಟ್ಟು ಹೇಳಿದಂತಿದೆ ಈ ಪದ್ಯ.

ಗುರುಮಹಿಮೆಯನ್ನು ವರ್ಣಿಸುವ ಕೆಲವು ಪದ್ಯಗಳನ್ನು ವಿಶಿಷ್ಟ ರೀತಿಯಲ್ಲಿ ಇವೆ. ಕಬೀರದಾಸನು ಹೇಳುವಂತೆ ಭೂಮಿಯನ್ನೇ ಹಾಳೆಯಾಗಿ ಮಾಡಿ ಸಪ್ತಸಾಗರಗಳ ನೀರನ್ನು ಮಸಿ ಮಾಡಿ, ಭೂಮಿಯ ಮೇಲಿನ ಎಲ್ಲ ತರುಲತೆಗಳನ್ನು ಲೇಖನಿಯನ್ನಾಗಿ ಮಾಡಿ ಬರೆದರೂ ಗುರುವಿನ ಮಹಿಮೆಯನ್ನು ಬರೆಯಲಾಗದು. ಎನ್ನುವ ಮಾತನ್ನು ನೋಡಿದರೆ ಗುರುವಿನ ಮಹತ್ವ ಎಷ್ಟಿರಬಹುದು ಎನ್ನುವುದು ತಿಳಿಯುತ್ತದೆ.

“ಗುರು ಕೊಳುಕೊಡೆಯ ಭಕ್ತರಲಿ ಮಾಡಬಹುದೆ ಇದು
ಗುರುವಿಂಗೆ ಕುಂದೆಂದು ಬರೆಯುತಿಹನು

ಗುರು ಪೂರ್ವದಲಿ ನಡೆದುದನೆ ನಡೆವನಲ್ಲದಲಿ
ಗುರು ಮಹಿಮೆಯಂತೆಂಬ ತೆರನರಿಯೆ.
ಗುರುಮನೆಯ ಕಸವ ತಿಪ್ಪೆಗೆ ಒಯ್ದು ಹಾಕರೆ
ನೆರಮನೆಯ ಕಸವು ತಿಪ್ಪೆಗೆ ಬೀಳದೆ
ಬೆರೆದು ಕೂಡಿದ ಕಡಕೆ ಗುರುಶಿಷ್ಯತನ ವುಂಟೆ
ಅರಿಯದ ಜ್ಞಾನಿ ಕೇಳ್ಕುಲ ತಿಪ್ಪೆಯಂ,[೩೬]

ಇಲ್ಲಿ ಗುರು ಮತ್ತು ಶಿಷ್ಯ ಒಂದೇ ಎಂಬ ಭಾವ ಮೂಡಿದೆ. ಶಿಷ್ಯ ಜ್ಞಾನವಂತನಾಗಲು ಗುರುವಿನಿಂದ ತಿಳಿಯುವುದು ಅಧಿಕವಾಗಿರುತ್ತದೆ. ಗುರು ಜ್ಞಾನವನ್ನು ನೀಡುವುದು ಶಿಷ್ಯ ಜ್ಞಾನವನ್ನು ಪಡೆಯುವುದು ಒಂದೇ ಮಾರ್ಗದಲ್ಲಿ ಇರುವುದರಿಂದ ಇವರಿಬ್ಬರ ಮಧ್ಯ ಬೇಧವೆನ್ನುವುದು ಇಲ್ಲ. ಇದೇ ಅರ್ಥವನ್ನು ಇಲ್ಲಿ ತಿಪ್ಪೆಯಲ್ಲಿರುವ ಕಸ ಯಾರದಾದರೇನು ಕಸ ಎಂದ ಮೇಲೆ ಎಲ್ಲ ಒಂದೇ ಅದಕ್ಕೆ ಗುರುಮನೆಯದು, ಶಿಷ್ಯನ ಮನೆಯದು ಎಂಬ ಭೇದವಿಲ್ಲ ಎಂಬ ವಿಶೇಷಾರ್ಥದಲ್ಲಿ ಹೇಳಲಾಗಿದೆ.

ಗುರು ಗುಂಡಬಸವನು ಮಂಡಲದೊಳಗೆ ಪ್ರಚಂಡನು ಎಂದು ಕೊಂಡಾಡಿರುವ ಪದ್ಯ ಗುರುಸ್ತುತಿಗೆ ಹಿಡಿದಿರುವ ಕನ್ನಡಿಯಾಗಿದೆ.

ಕಂಡೆನಯ್ಯ ನಾನು ಮಂಡಲದೊಳಗೆ ಪ್ರ
ಚಂಡ ಗುರು ಗುಂಡಬಸವನ
ಸತ್ಯವ ಸಾರಿದ ಬಂದು
ಯುಕ್ತಿಯ ತೋರಿದ ನಿಂದ
ಮುಕ್ತಿಯ ಬೀರಿದ ತಂದು
ಭಕ್ತಿಯ ಭಾವದ ಸಿಂಧು.[೩೭]

ಮಂಡಲದೊಳಗೆ ಪ್ರಚಂಡಮೂರುತಿ ಗುರುಗುಂಡಬಸವೆ ಎಂದು ಶಿಷ್ಯ ಕೊಂಡಾಡಿದ್ದಾನೆ. ಗುಂಡಬಸವನ ವ್ಯಕ್ತಿತ್ವದ ನೈಜ ಚಿತ್ರಣವನ್ನು ಮಾಡಿದಂತಿದೆ ಈ ಪದ್ಯ. ಸತ್ಯವನು ಸಾರಿದ ಎನ್ನುವುದು ಡಂಗುರ ಪದಗಳನ್ನು ಹೇಳಿದ್ದು, ಅವು ಸತ್ಯವಾಗಿದ್ದವು ಎಂಬ ಅಂಶವನ್ನು ಮನದಟ್ಟು ಮಾಡುತ್ತದೆ. ಯುಕ್ತಿಯ ತೋರಿದ ನಿಂದು ಅಂದರೆ ಜ್ಞಾನದ ವಿಷಯವನ್ನು ಜನರಿಗೆ ಮನಮುಟ್ಟುವಂತೆ ಹೇಳುವುದು, ಸಾಮಾನ್ಯರಿಗೆ ಮಾದರಿಯಾಗುವಂತೆ ನುಡಿದಂತೆ ನಡೆಯುವುದು. ಇವು ಕಾಲಕಾಲಕ್ಕೆ ನಡೆದದ್ದು ಮುಕ್ತಿ ಎಂಬ ಭಾವವನ್ನು ತೋರಿದಂತಿದೆ. ಮುಕ್ತಿಯನ್ನು ನೀಡಲೆಂದೇ ಭೂಮಿಗೆ ಅವತರಿಸಿ ಬಂದಿರುವ ಭಾವದ ಸಿಂಧುವೆಂದು ಗುರುಗುಂಡನನ್ನು ಬಣ್ಣಿಸಲಾಗಿದೆ.

ಗುಂಡಬಸವಣ್ಣನನ್ನು ಧರ್ಮಪುರಾಧೀಶ ಎಂದು ಕರೆದಿರುವುದನ್ನು ನೋಡಿದರೆ, ಧರ್ಮಕಲ್ಯಾಣದ ಆಚಾರ, ವಿಚಾರಗಳು ಜನರ ಮನಮುಟ್ಟಿದ್ದವೆನ್ನುವುದರಲ್ಲಿ ಸಂಶಯವಿಲ್ಲ. ಗುಂಡಬಸವಣ್ಣನೆ ದೈವ ಅವನಲ್ಲದೇ ಮತ್ತಿನ್ನಾರು ಗತಿಯಿಲ್ಲ ಎಂದು ಸ್ತುತಿಸಲಾಗಿದೆ.

ಬನ್ನಿ ನೋಡುವ ಧರ್ಮಪುರಾಧೀಶನ ಸಂ
ತನ್ನ ಮೂರುತಿ ಗುರು ಗುಂಡರಾಯನ.[೩೮]

ಇಮ್ಮಡಿ ಗುಂಡನಲ್ಲದೆ ದೈವವಿಲ್ಲ
ಉಮ್ಮಹ ಜನರು ಕೇಳಿರೇ ನೀವೀ ಸೊಲ್ಲ
ಇಮ್ಮಡಿ ಗುಂಡನಲ್ಲದೆ ದೈವವಿಲ್ಲ.[೫೯]

ಹೀಗೆ ಗುಂಡಬಸವಣ್ಣ ಜನರನ್ನು ಉದ್ಧಾರ ಮಾಡಲೆಂದು ಭೂಮಿಗೆ ಇಳಿದು ಬಂದು, ದೈವೀ ಪುರುಷನಾಗಿ ನೆಲೆಸಿದ್ದಾನೆ. ಗುರು ಗುಂಡರಾಯ ಈ ಎಲ್ಲ ಪದ್ಯಗಳನ್ನು ಪರಾಮರ್ಶಿಸಿದಾಗ ಎಲ್ಲ ಪದ್ಯಗಳಲ್ಲೂ ಗುರುವಿನ ಆರಾಧನೆ ಇರುವದರಿಂದ ಈ ಸ್ವರವಚನಗಳು ಗುರುವಿನ ಪಟ್ಟದ ಶಿಷ್ಯನೊಬ್ಬನಿಂದ ರಚಿಸಲ್ಪಟ್ಟಿರಬಹುದು. ಎಂದು ಗೊತ್ತಾಗುತ್ತದೆ. ಅಧ್ಯಾತ್ಮದಲ್ಲಿ ಗುರುನಾಮಸ್ಮರಣೆಗೆ ವಿಶೇಷವಾದ ಅರ್ಥವಿದ್ದು ಅದು ನಿಜ ಎನ್ನುವ ಅಂಶವನ್ನು ಪ್ರಸ್ತುತ ಈ ಸ್ವರ ವಚನಗಳಲ್ಲಿ ಸಾಬೀತಾದಂತೆ ಕಂಡುಬರುತ್ತದೆ.

ಸಮಾಜ ವಿಮರ್ಶೆ

ಮಾನವ ಮೂಲತಃ ಸಮಾಜಜೀವಿ. ಸಮಾಜದಲ್ಲಿ ಹಲವಾರು ಸಮುದಾಯಗಳ ಒಕ್ಕೂಟವಿರುತ್ತದೆ. ಈ ಎಲ್ಲ ಸಮುದಾಯಗಳ ನಿಲುವುಗಳು ಬೇರೆ ಬೇರೆಯಾಗಿರುತ್ತವೆ. ಮೇಲ್ವರ್ಗ, ಕೆಳವರ್ಗ ಎನ್ನುವಂತಹ ಪದ್ಧತಿ ಸನಾತನ ಕಾಲದಿಂದಲೂ ಬೆಳೆದು ಬಂದಿರುವಂತಾದ್ದು. ಹದಿನೈದು ಹದಿನಾರನೆಯ ಶತಮಾನದಲ್ಲಿ ಸಮುದಾಯಗಳ ಮಧ್ಯದಲ್ಲಿ ಕೋಮು ಗಲಭೆಗಳು, ಮಹಾನ್ ಯುದ್ಧಗಳಾಗಿ ಪರಿಣಮಿಸಿರುವ ರೀತಿಯನ್ನು ನೋಡಿದರೆ ಸೌಹಾರ್ದತೆಯ ಅವಶ್ಯಕತೆಯನ್ನು ನೀಗಿಸುವ ಸಮರ್ಥ ವ್ಯಕ್ತಿಗಳು ಕಾಲ-ಕಾಲಕ್ಕೆ ಉದಯಿಸುತ್ತಾ ಬಂದಿದ್ದಾರೆ. ಲೌಕಿಕ ಜಗತ್ತಿಗೆ ಅಂಟಿಕೊಂಡ ಜಾಡ್ಯವನ್ನು ತೊಳೆಯುವ ಮಹಾಪುರುಷರ ನಡತೆಯೇ ಒಂದು ಮಾದರಿಯಾಗಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ನುಡಿದು ಅದರಂತೆ ನಡೆದು ಸಮಾಜ ಬದಲಾವಣೆಗೆ ಸಾಕಷ್ಟು ಪ್ರಯತ್ನ ಪಟ್ಟಿರುವುದನ್ನು ಸ್ವರವಚನಗಳು ಸಾರಿ ಸಾರಿ ಹೇಳುತ್ತವೆ.

ರೈತರು ಬೆಳೆಯುವ ಬೆಳೆಗೆ ವಿಶೇಷವಾದ ಅರ್ಥವನ್ನು ಕಲ್ಪಿಸಿ ಪೂಜೆಯನ್ನು ಮಾಡುವ ಪದ್ಧತಿಯು ಇಂದಿಗೂ ರೂಢಿಯಲ್ಲಿದೆ. ಬೆಳೆಯುವ ಬೆಳೆಯಲ್ಲ ಪ್ರಸಾದ ಎಂಬ ಭಾವನೆಯನ್ನು ಕಲ್ಪಿಸಲಾಗಿತ್ತು.

ಬೆಳೆಯು ಪ್ರಸಾದವೆನಲು ಹಳಿಯಲೇತಕ ಬರುವೆ
ಬೆಳೆಯದಿರಲು ಮುಂದೆ
ಉಳುವ ಹಾದಿಯತೋರಿ ಉರ್ವಿಯೊಳಗದ ಬಿಟ್ಟು
ಪ್ರಳಯದೊಳಗಾಗಿ ಕೆಟ್ಟು
ಕಳವಳಿಸಿ ಕಂಗೆಟ್ಟು ಕೈಯೊಡ್ಡುವೆ ಗತಿಗೆಟ್ಟು
ಹೊಲೆ ಹೊಲೆಯರ ಮನೆಯ ಹೊಕ್ಕು
ಕುಲಗೆಟ್ಟು ಫಲಗೆಟ್ಟು ಬಲಗೆಟ್ಟು ಬಾಯಿಟ್ಟು
ಹಲವ ಹಂಬಲಿಸಿ ಸತ್ತು.[೬೦]

ಈ ಪದ್ಯದಲ್ಲಿ ಸಮಾಜದ ಜನ ಒಂದು ಸಾರಿ ಬೆಳೆ ಚೆನ್ನಾಗಿ ಬಂದ ಮೇಲೆ ನಾನು ಮೇಲು ಎಂದು ನಡೆಯುವ ಅಹಂ, ನಾನೆ ಬೆಳೆದೆ ಎನ್ನುವ ಕೊಂಕು ಇರುವುದನ್ನು ತಿಳಿಸುತ್ತದೆ. ಬೆಳೆ ಬೆಳೆಯದೆ ಹೋದರೆ ಏನು ಮಾಡುವಿ,

ಪ್ರಳಯವಾಗಿ ನಾಶವಾದರೆ ಏನಾಗುವಿ ಎಂದು ಪ್ರಶ್ನಿಸಿದಂತಿದೆ. ಎಲ್ಲ ಕೆಟ್ಟುಹೋದ ಮೇಲೆ ಕಳವಳಗೊಂಡು, ಕಂಗೆಟ್ಟು ಗತಿ ಇಲ್ಲದೆ ಬೇರೆಯವರಿಗೆ ಕೈಯೊಡ್ಡುವೆ, ಕೀಳುಕುಲದವರ ಮನೆಗೆ ನುಗ್ಗಿ ಕುಲಗೇಡಿಯಾಗುವೆ, ನನ್ನದೆನ್ನುವ ಛಲ ಬಿಟ್ಟುಹೋಗುತ್ತದೆ. ಅನ್ಯರಿಗೆ ಬಾಯಿಬಿಟ್ಟು ಬೇಕು ಬೇಕು ಎಂದು ಬಾಯಿ ಬಿಡುತ್ತ ಸತ್ತುಹೋಗುವೆ ಎಂದು ಸಮಾಜದಲ್ಲಿ ನಡೆಯುವ ಸಂಗತಿಯ ಚಿತ್ರಣವನ್ನು ನೀಡಿದಂತಿದೆ. ಅಂದಿನ ಸಮಾಜದಲ್ಲಿ ಹೊಲೆಯರ ಮನೆಯ ಒಳಗೆ ಹೋದರೆ ಕುಲಗೆಟ್ಟವನು ಎನ್ನುವ ಪಟ್ಟವಿತ್ತು ಎಂದು ನೇರವಾಗಿ ತಿಳಿಯಬಹುದಾಗಿದೆ. ಇಂತಹ ವಿಚಾರಗಳಲ್ಲಿ ಸಮಾಜದಲ್ಲಿ ಉತ್ತಮವಾದ ಚಾರಿತ್ರ್ಯವನ್ನು ಕಾಪಾಡಿಕೊಂಡು ಹೋಗುವುದು ಸಾಮೂಹಿಕ ಪ್ರತಿಷ್ಠೆಯಾಗಿತ್ತೆಂದು ತಿಳಿಯುತ್ತದೆ.

ಸಮಾಜದಲ್ಲಿ ಹೆಣ್ಣಿಗೆ ವಿಶೇಷವಾದ ಗೌರವ ಇರುವುದು ಬಹಳ ಹಿಂದಿನಿಂದಲೂ ರೂಢಿಯಲ್ಲಿದೆ. ಅವಳಿಗೆ ತನ್ನದೇ ಆಗಿರುವಂತಹ ಕಟ್ಟಳೆ ನಿಬಂಧನೆ ಇರುವುದು ಇವತ್ತಿಗೂ ಸಹ ರೂಢಿಯಲ್ಲಿದೆ. ಇಂತ ಕಟ್ಟಳೆಯನ್ನು ಮೀರಿದವರಿಗೆ ಕೆಟ್ಟ ಪಟ್ಟ ಬಹುಬೇಗ ತಲೆಗೇರುತ್ತದೆ ಎನ್ನುವುದಂತೂ ಕಟುಸತ್ಯದ ವಿಷಯವಾಗಿದೆ. ಮದುವೆಯಾದ ಮಹಿಳೆಯಂತೂ ಅನೇಕ ಬಂಧನಗಳಿಗೆ ಒಳಗಾಗಿ ನಡೆದುಕೊಳ್ಳುವ ಪದ್ಧತಿ ಇದ್ದು, ಬಂಧನ ಮೀರಿದವಳಿಗೆ ಸಮಾಜದಲ್ಲಿ ಕವಡೆ ಕಿಮ್ಮತ್ತಿನ ಬೆಲೆ ಇರಲಿಲ್ಲವೆಂದು ತಿಳಿದಿದ್ದೇವೆ. ಅಂತಹದೇ ಒಂದು ಪದ್ಯ ಈ ಸ್ವರವಚನದಲ್ಲಿದೆ. ಗಂಡಗಂಜದ ಗಯ್ಯಾಳಿ ಎಂದು ಗಂಡನ ಮಾತನ್ನು ಮೀರಿ ನಡೆಯುವ ಹೆಣ್ಣಿನ ಮೊಂಡುತನವನ್ನು ಇಲ್ಲಿ ಬಿಂಬಿಸಲಾಗಿದೆ.

"ಗಂಡಗಂಜದ ಗಯ್ಯಾಳಿಯು ನಾ
ಮನೆ ಮನೆ ತಪ್ಪದೆ ತಿರುಗಿ
ಮಂಡೆಹುಳಿತ ನಾಯಂತೆ
ತೊಳಲುವೆನು ಊರ ದೊಡ್ಡಿ ಕೊಟ್ಟಿಗೆಯಲಿ"
ನಾಚಿಕೆಯಿಲ್ಲದ ನಡೆದಾಡುತಿಹಳು ನಾನೇ ಗರತಿಯೆನುತಿಹಳು
ಯೋಚನೆ ಮನದೊಳು ಸಟೆದಿಟ ಮಾಡಲು ವೆಗ್ಗಲ ಗುಡುಗುಡಿಸುವಳು
ಮೋಚಿದರೊಳ್ಳಿತು ಅಹುದೆಂಬುವಳು ಮುಂಡೆಯಾಗಿ ಬಾಳುವೆನು
ವಿಚಾರಿಸಿದ ಪುರುಷನ ಒಗೆತನ ಛೀ, ಛೀ ಎಂತೆನುತಿಹಳು."೨೧

ಗಂಡನಿಗೆ ಹೆದರದೆ ಇರುವಂತಹ ಹೆಂಡತಿಯು ಯಾವ ರೀತಿ ನಡತೆಯನ್ನು ಹೊಂದಿರುತ್ತಾಳೆ ಎನ್ನುವ ಅಂಶ ಇಲ್ಲಿ ಬಿಂಬಿತವಾಗಿದೆ. ಗಂಡನಿಗೆ ಅಂಜದೆ ಎದುರು ಮಾತನಾಡುತ್ತ, ಮನೆ-ಮನೆ ತಿರುಗಿ ಹರಟೆ ಹೊಡೆಯುತ್ತಾ ಕಾಲ ಕಳೆಯುವ ಹೆಂಗಸನ್ನು ಇಲ್ಲಿ ತಲೆಯಲ್ಲಿ ಹುಳ ಬಿದ್ದ ನಾಯಿಗೆ ಹೋಲಿಸಲಾಗಿದೆ. ನಾಯಿ ತಲೆಯಲ್ಲಿ ಹುಳ ಬಿದ್ದಿತೆಂದರೆ ಮುಗಿಯಿತು ಅದು ಸಾಯುವವರೆಗೂ ಗಾಯ ವಾಸಿಯಾಗುವುದಿಲ್ಲ. ಅದೇ ರೀತಿಯಾಗಿ ಗಂಡನಿಗೆ ಹೆದರದೇ ಇರುವಂತಹ ಮಹಿಳೆ ಸಾಯುವವರೆಗೂ ಬದಲಾಗುವುದಿಲ್ಲ. ಗಯ್ಯಾಳಿಯಾಗಿ ಊರು ತಿರುಗುತ್ತ, ನಾನೇ ಶ್ರೇಷ್ಠ ಎಂದು ಬೀಗುತ್ತಾಳೆ. ನಾಚಿಕೆ ಅಂಜಿಕೆ ಎನ್ನುವುದು ಅವಳಿಗೆ ಗೊತ್ತೇ ಇಲ್ಲವೆಂದು ಇಲ್ಲಿ ಚಿತ್ರಿಸಿದಂತಿದೆ. ನಾಚಿಕೆ ಇಲ್ಲದೆ ನಡೆದಾಡುತ್ತ ನಾನೇ ಗರತಿಯೆಂದು ಎಲ್ಲರೆದುರು ಹೇಳಿಕೊಳ್ಳುತ್ತ

ನಡೆದಾಡುವಳು. ಭಾವ ಮೈದುನರನ್ನು ಬಯ್ಯುತಿಹಳು. ಹಿರಿಯರಿಗೆ ಗೌರವವನ್ನು ಕೊಡದೆ ಕೆಟ್ಟದಾಗಿ ಮಾತಾಡುವಳು. ಯಾವಾಗಲೂ ಗಟ್ಟಿಯಾಗಿ ಮಾತನಾಡುವುದು, ಚೀರುವುದನ್ನು ಮಾಡುವಳು, ಗಂಡನಿಗೆ ಸತ್ತನಾಯಿ ಎಂದು ಬಯ್ಯುವಳು ಹೀಗೆ ಹತ್ತು ಹಲವಾರು ಕೆಟ್ಟಗುಣಗಳನ್ನು ಹೇಳಲಾಗಿದೆ.

ಸಮಾಜದಲ್ಲಿ ಇಂತಹ ಸ್ತ್ರೀಯರು ಇಂದೂ ಇದ್ದಾರೆ. ಹೆಣ್ಣಿಗೆ ಎರಡನೆಯ ಮದುವೆ ಮಾಡುವ ಪದ್ಧತಿ ಅಂದಿನ ಸಮಾಜದಲ್ಲಿ ಇತ್ತು ಎಂಬ ಅಂಶವನ್ನು ಈ ಕೆಳಗಿನ ಪದ್ಯದಿಂದ ತಿಳಿಯಹುದು.

"ಮೊದಲಗಂಡನ ಮಕ್ಕಳಿಗೆಂದರೆ ಮನದೊಳು ಮರುಗುತಲಿಹಳು ತನ್ನ
ಮದುವೆಯಾಗಿ ತಂದಾತನ ಮಕ್ಕಳ ಕಂಡರೆ ಉರಿಯುತಲಿಹಳು
ಪದರ ಪಲ್ಲಟದ ಮಾತನು ಬಿಡಳು ಪಾರು ಮೂಳಿ ತಾನೀಗ
ಹದುರ ಚದುರನಾಡಂತ ಗಂಡನಿಂದಲೂ ಒದಿಸಿಕೊಂಡು ಒರಲುವಳು."[೨೦]

ಇಲ್ಲಿ ಹೆಣ್ಣು ಮಗಳೊಬ್ಬಳು ಎರಡನೆಯ ಮದುವೆಯಾದ ವಿಚಾರ ಪ್ರಸ್ತಾಪವಾದಂತಿದೆ. ಮೊದಲ ಗಂಡನ ಮಕ್ಕಳಿದ್ದು ಆ ಮಕ್ಕಳೆಂದರೆ ಬಹಳ ಪ್ರೀತಿ. ಆದರೆ ಈಗ ಎರಡನೆಯ ಗಂಡನಿಗೆ ಆಗಿರುವ ಮಕ್ಕಳ ಕಂಡರೆ ಕೋಪ ಮಾಡಿಕೊಳ್ಳುವಳು. ಹಗುರ ಮಾತನಾಡಿ ಗಂಡನಿಂದ ಒದೆತಿಂದು ಮಲಗುವಳು. ಹೀಗೆ ಈ ಎಲ್ಲ ಅಂಶಗಳನ್ನು ಗಮನಿಸಿದರೆ, ಅಂದು ಹೆಣ್ಣೊಬ್ಬಳು ಮದುವೆಯಾಗಿ, ಮಕ್ಕಳಾಗಿದ್ದರೂ ಸಹ ಗಂಡ ತೀರಿದ ನಂತರ ಮರುಮದುವೆಗೆ ಅವಕಾಶವಿತ್ತು ಎಂದು ತಿಳಿಯಬಹುದು.

ಬಹು ಪುರಾತನ ಕಾಲದಿಂದಲೂ ಭೂಮಿಯನ್ನು ಪೂಜೆ ಮಾಡುತ್ತಾ ಬಂದಿರುವುದನ್ನು ನಮ್ಮ ದೇಶದಲ್ಲಿ ಕಾಣುತ್ತೇವೆ. ಇದೇ ರೀತಿಯಾಗಿ ಧರ್ಮಕಲ್ಯಾಣ ಪರಿಸರದಲ್ಲಿ ಆಧ್ಯಾತ್ಮಿಕ ಚಿಂತನೆಗಳು ಸದಾ ನಡೆಯುತ್ತಿದ್ದರು ಸಹ ಜೊತೆಗೆ ಸಂಪ್ರದಾಯಬದ್ಧ ಆಚರಣೆಗಳು ಇದ್ದದ್ದನ್ನು ಕೆಲವು ಸ್ವರವಚನಗಳು ತಿಳಿಸುತ್ತವೆ.

ಇಳೆಯೇ ದೇವರೆ
ಬೆಳೆಯೇ ಜೋಳವೆ,
ಗದಿಗೆದೇವರ ಮುದ್ದು ಮುಖದ ಚೆನ್ನೆ
ರುದ್ರಶಕ್ತಿಯರ ಬಲದೇವಿ
ರುದ್ರಶಕ್ತಿಯರ ಬಲದೇವಿ ಪರಶಿವನ
ಅರ್ಧಾಂಗಿಗೆರಗಿ ಬೇಡಿಕೊಂಬೆ[೨೧]

ಭೂಮಿಯನ್ನು ದೇವರೆಂದು ಪೂಜಿಸುವ ಪದ್ಧತಿ ರೂಢಿಯಲ್ಲಿತ್ತು. ಅದೇ ರೀತಿ ಅಂದಿನ ಪ್ರಮುಖ ಬೆಳೆ ಜೋಳವೆಂದು ತೋರುತ್ತದೆ. ಬೆಳೆಯೇ ಜೋಳವೆ ಎಂದು ಹೇಳಿರುವುದನ್ನು ನೋಡಿದರೆ ಅಂದು ಆಹಾರ ಬೆಳೆಯಾಗಿ ಜೋಳ ಪ್ರಾಮುಖ್ಯತೆಯನ್ನು ಪಡೆದಿತ್ತು. ಭೂಮಿತಾಯಿಯು ಶಕ್ತಿದೇವತೆ ಎಂದೂ, ರುದ್ರಶಕ್ತಿಯರ ಬಲದೇವಿ ಎಂದೂ ಶಿವನ ಅರ್ಧಾಂಗಿಯ ಸಮಾನಳೆಂದು ಹೇಳಲಾಗಿದೆ. ಸಮಾಜದಲ್ಲಿ ಭೂಮಿಪೂಜೆ, ಜೋಳದ ಪೂಜೆ ಇದ್ದಂತೆ ತೋರುತ್ತದೆ. ಇಂದಿಗೂ ಸಹ ಶೀಗೆ ಹುಣ್ಣಿಮೆಯಂದು ಜೋಳದ ಬೆಳೆಗೆ ಪೂಜೆ ಮಾಡಿ ಚರಗ ಚೆಲ್ಲುವ ಪದ್ಧತಿ ಉತ್ತರ ಕರ್ನಾಟಕ ಭಾಗದಲ್ಲಿ ರೂಢಿಯಲ್ಲಿದೆ.

ಸ್ವರವಚನ ಸಾಹಿತ್ಯ ಸಮಾಜದ ಸಾಮಾನ್ಯ ಜನರಿಗೆ ಅರ್ಥವಾಗುವಂತೆ ಸಾಮಾನ್ಯ ಪಶುಪಕ್ಷಿಗಳ ರೂಪಕಗಳ ಮೂಲಕ ಹೇಳಲಾಗಿದೆ.

ಕೋಳಿ ಕೂಗಿದರೆ ಕೋಗಿಲೆ ದನಿಗೆ ಸರಿಯಹುದೆ
ಹಾಲ ಹಂಸೆಗೆ ಬಕನು ಸರಿಯಪ್ಪುದೆ
ಆಲೋಕಿಸಿದ ಫಲವನೀವ ಸುರತರುವಿಂಗೆ
ಕೀಳು ಬೊಬ್ಬುಲಸೆಯ ಸರಿಗಟ್ಟಬಹುದೆ
ಜಾಳು ಕಾಜಿನ ಮಣಿಗೆ ಚಿಂತಾಮಣಿ ಸರಿಯಹುದೆ
ಹೊಳೆವ ಹೊನ್ನೆಯ ಹುಳಕೆ ಮಿಂಚು ಸರಿಯೆ
ಭಾಳಯೋಚನನ ಶರಣರು ನರರ ಸುರಿಯೆನಲ
ಹಾಳಾಗಿ ಹೋಹುದಕೆ ಮೊದಲಲ್ಲವೆ."

ಇಲ್ಲಿ ಭಾಳಯೋಚನನ ಶರಣರು ಶ್ರೇಷ್ಠರಾದವರು ಎನ್ನುವ ವಿಷಯವನ್ನು ಹೇಳಬೇಕಾಗಿದೆ. ಅದಕ್ಕೆ ಕೋಳಿ-ಕೋಗಿಲೆ ದನಿಯನ್ನು ಉದಾಹರಣೆ ನೀಡಲಾಗಿದೆ. ಕೋಗಿಲೆಯ ಧ್ವನಿ ಕೇಳಲು ಇಂಪು ಅದಕ್ಕೆ ಕೋಳಿಯ ಧನಿ ಸರಿಸಮವಾಗಲಾರದ (ಸಾಟಿ) ಎಂಬ ಅಂಶ ಬಿಂಬಿತವಾಗಿದೆ. ಹಂಸಪಕ್ಷಿ ಬಕಪಕ್ಷಿಗಿಂತ ಶ್ರೇಷ್ಠ, ಕಾಜಿನ ಮಣಿಗಿಂತ ಚಿಂತಾಮಣಿ ಶ್ರೇಷ್ಠ ಹೀಗೆ ಹಲವು ಸ್ವರವಚನಗಳು ರಚಿತವಾಗಿವೆ.

ಸಮಾಜದ ಪ್ರತಿಯೊಂದು ಅಂಶವನ್ನು ಸೂಕ್ಷ್ಮವಾಗಿ ಗಮನಿಸಿ ವಿಡಂಬನಾತ್ಮಕವಾಗಿ ಟೀಕಿಸುತ್ತಾ ಸಮಾಜ ತಿದ್ದುವ ಪ್ರಯತ್ನವನ್ನು ಮಾಡಿದರೆಂದು ಹೇಳಬಹುದು. ಸ್ವರವಚನಗಳಲ್ಲಿ ಸಾಮಾಜಿಕ ಅಂಶಗಳು ಅಷ್ಟಾಗಿ ಬರದೇ ಇದ್ದರೂ ವಿಡಂಬನಾತ್ಮಕವಾಗಿ ಚಿತ್ರಿಸಿರುವುದು ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ವಿಮರ್ಶೆ ಮಾಡಲು ಸಾಧ್ಯವಾಯಿತು.

**ಧಾರ್ಮಿಕ ಚಿಂತನೆ**

ಧರ್ಮಕಲ್ಯಾಣ ಪರಂಪರೆಯ ಸಾಹಿತ್ಯದಲ್ಲಿ ಬರುವ ಎಲ್ಲ ಅಂಶಗಳು ಪ್ರಮುಖವಾಗಿ ಧಾರ್ಮಿಕ ಚಿಂತನೆಗಳೇ ಆಗಿವೆ. ಲಿಂಗಾಯತ ಧರ್ಮಕ್ಕೆ ಸಂಬಂಧಿಸಿದಂತಹ ಆಚಾರ, ವಿಚಾರಗಳು, ನೀತಿ, ನಿಯಮಗಳ ಚಿತ್ರಣಕ್ಕೆ ಸ್ಥಾನಮಾನವಿದ್ದು ಶಿವಲಿಂಗದ ಸೂಕ್ತ ಎಲ್ಲ ಅಂಶಗಳಿಂದ ಸುತ್ತುವರಿದಿವೆ. ಶಿವಲಿಂಗವನ್ನು ಪೂಜೆ ಮಾಡು ಎನ್ನುವಂತಹ ಅಂಶವನ್ನು ಹೀಗೆ ಹೇಳಲಾಗಿದೆ.

"ಪೂಜೆಮಾಡಿದು ಪೂರ್ವಶೈವ ಪೃಥ್ವ್ಯಾಂಬರವ ಸ
ಹಜವಳಿದವು ನಾಲ್ಕುಯುಗದ ಲಿಂಗ."
"ಕೃತಯುಗದಲಿ ಚಿನ್ನದ ಲಿಂಗಪೂಜೆ
ತ್ರೇತಾಯುಗದಲಿ ಬೆಳ್ಳಿಯ ಲಿಂಗ
ದ್ವಿತೀಯ ದ್ವಾಪರದಲಿ ತಾಮ್ರಲಿಂಗಾರ್ಚನೆಯು
ಇಂಥ ಕದನ ಕಲಿಯುಗದಲಿ ಕಲ್ಲಲಿಂಗ"

ಲಿಂಗಪೂಜೆಯನ್ನು ಮಾಡು, ನಾಲ್ಕುಯುಗಗಳಲ್ಲಿಯೂ ಶ್ರೇಷ್ಠತೆಯನ್ನು ಪಡೆದವರು ಲಿಂಗಪೂಜೆಯನ್ನು ಮಾಡಿದವರಾಗಿದ್ದಾರೆ. ಕೃತಯುಗದಲ್ಲಿ ಮೊದಲಿಗೆ ಚಿನ್ನದ ಲಿಂಗಪೂಜೆಯನ್ನು ಮಾಡುತ್ತಿದ್ದರು. ನಂತರ ದ್ವಾಪರಯುಗದಲ್ಲಿ ತಾಮ್ರದ ಲಿಂಗಪೂಜೆ ಮಾಡಿದರು. ಇಂದು ಕಲಿಯುಗದಲಿ ಕಲ್ಲಿನ ಲಿಂಗಪೂಜೆ ನಡೆಯುತ್ತಿದೆ ಎಂದು ಹೇಳಿರುವುದು ಲಿಂಗಪೂಜೆ ಮಹತ್ವ ಕಡಿಮೆಯಾದಂತೆ ಕಾಣುತ್ತದೆ. ಚಿನ್ನದಿಂದ ಮಾಡಿದ ಲಿಂಗಪೂಜೆಯ ಶ್ರೇಷ್ಠತೆ ಬೇರೆ ಕಲ್ಲಿನಿಂದ ಮಾಡಿದ ಲಿಂಗಪೂಜೆಯ ಶ್ರೇಷ್ಠತೆಯೇ ಬೇರೆ ಎಂದು ಎನಿಸುತ್ತದೆ.

ಲಿಂಗವಂತನೆನಿಕೊಂಡವನು ಪಾತಕಿಯಾಗಬಾರದು ಎನ್ನುವ ವಿಚಾರವನ್ನು ತುಂಬಾ ಮಹತ್ವಪೂರ್ಣ ವಿಚಾರದಿಂದ ತಿಳಿಹೇಳಿದಂತಿದೆ.

"ಲಿಂಗದ ಗುಣದ ಅಜ್ಞಾನಿ ನಾನು
ಲಿಂಗವಂತನೆನಿಸಿಕೊಂಬೆ ಪಾತಕ ನನ್ನ ಅಂಗದ"
ಕಂಗಳು ನಾಸಿಕ ಮುಂಗುರುಳಿನಾ ಚಲ್ವ
ಭೃಂಗಕುಂತಳೆಯರ ನಾನೋಡಿ
ಭಂಗಿತನಾಗಿ ಭ್ರಮಿತನಾಗಿ ಬಯಸಿದೆ
ಲಿಂಗಭಕ್ತನೆಂತೆಹನು ಪಾತಕನ ನನ್ನ ಅಂಗದ"

ಹೆಸರಿಗೆ ಮಾತ್ರ ಲಿಂಗವಂತನೆನಿಸಿಕೊಂಡರೆ ಸಾಲದು, ಅದು ಮನಸ್ಸು ಮತ್ತು ಕಾಯ ಎರಡರಿಂದಲೂ ಶುದ್ಧನಾಗಿರಬೇಕು ಎಂಬ ಅರ್ಥವನ್ನು ಸೂಚಿಸುತ್ತದೆ. ಯೌವನದ ಯುವತಿಯ ಕಂಗಳು, ಅವಳ ಮೂಗೂ, ಮುಂಗುಳುರುಳಿನ ಚೆಲುವು ಇವೆಲ್ಲವನ್ನು ನೋಡಿ ಭ್ರಮಿತನಾಗಿ, ಮನಸ್ಸಿನಲ್ಲಿಯೇ ಕೂಟವನ್ನು ಬಯಸುವಂತವನು ಲಿಂಗಭಕ್ತನಾಗಲು ಸಾಧ್ಯವಿಲ್ಲ ಎಂದು ಹೇಳುತ್ತದೆ. ಅದೇ ರೀತಿ ಕಾಮದ ಮಿತಿ ತಪ್ಪಿ ಹೆಣ್ಣಿಗೆ ಸೋಲುವ ವಿಷಯ ಈ ಕೆಳಗಿನಂತಿದೆ.

"ಬಡನಡು ಬಲುಕುಚ ಕಡೆಗಣ್ಣ ನೋಟದ
ಮಡದಿಯರನೇ ನೋಡಿ ಮನಸೋತು
ಮಿಡಮಿಡನೆ ಮಿಡುಕುವೆನು ಕಾಮದಲಿ
ಮೃಡಭಕ್ತನೆಂತಹೆನು ಪಾತಕನು ನನ್ನ ಅಂಗದ"

ಹೀಗೆ ಹೆಣ್ಣಿನ ತೆಳುವಾದ ನಡು, ಉಬ್ಬಿದ ಮೊಲೆ, ಓರೆ ನೋಟ ಹೊಂದಿರುವವಳ ನೋಡಿ ಮನಸೋತು ಕಾಮಾತುರನಾಗಿ ಮೃಡನ ಭಕ್ತಿಯನ್ನು ಮರೆತುಬಿಡುವಂತಹ ಪಾತಕನು ಲಿಂಗದ ಮಹತ್ವವನ್ನು ಅರಿಯಲು ಸಾಧ್ಯವಿಲ್ಲ ಎಂಬ ಗೂಢಾರ್ಥವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಧಾರ್ಮಿಕ ವಿಚಾರಗಳಲ್ಲಿ ವಿಷಯ ಸುಖಕ್ಕೆ ಆಸೆ ಮಾಡಬಾರದೆಂದು ಸರ್ವಧಾರ್ಮಿಕ ಗ್ರಂಥಗಳು ಸಾರಿ ಹೇಳಿವೆ. ಅರಿಷಡ್ವರ್ಗವನ್ನು ಮೀರಿದಾತ ಧರ್ಮದ ಉತ್ತುಂಗವನ್ನು ತಲುಪ ಬಲ್ಲ ಎಂಬ ಅಂಶಗಳನ್ನು ಮನದಟ್ಟು ಮಾಡಿದಂತಿದೆ ಈ ಸ್ವರವಚನ ಸಾಹಿತ್ಯ.

ವಿಶ್ವವನ್ನು ಸೃಷ್ಟಿಸಿದಂತ ಬ್ರಹ್ಮನ ಕಲ್ಪನೆ ಬಹು ಪುರಾತನದ್ದು. ಬ್ರಹ್ಮ, ನಾರಾಯಣ, ಈಶ್ವರ ಎಲ್ಲ ದೇವರುಗಳನ್ನು ಭೂಮಿಯಲ್ಲಿರುವ ವಸ್ತುಗಳಿಗೆ ಹೋಲಿಕೆ ಮಾಡಿ ನಿತ್ಯ ಪೂಜೆಗೈಯುವ ಪದ್ಧತಿಯು ವಿಶೇಷವಾದದ್ದಾಗಿದೆ.

''ಪೃಥ್ವಿ ಬ್ರಹ್ಮನು ತಾನು ಅಪ್ಪು ನಾರಾಯಣನು
ತತ್ವವು ತೇಜರುದ್ರ
ಸೂತ್ರ ಸಮೀರನ ಈಶ್ವರನ ಸತ್ಯವೆಂಬರು ಸದಾಶಿವ
ತತ್ವ ಅಧಿಪತಿಗಳಿಗೆ ಮಹದೇವ
ಕರ್ತೃವಾತ್ಮದೆಲ್ಲಾ ಉತ್ಪತ್ತ್ಯೈಕ್ಯಗಳೆಂಬ
ಸೂಕ್ತ ರಹಸ್ಯಾರ್ಥವಿರಲು
ಮತ್ತೇಕೆ ಮಳೆತೀರ್ಥದಲ್ಲೆಂಬಿರಿ ರವಿಶಶಿಯಾತ್ಮ
ಮೂರ್ತಿ ಅಷ್ಟಾತ್ಮ ತಾನೆ''[೬]

ಇಲ್ಲಿ ಭೂಮಿಯನ್ನು ಬ್ರಹ್ಮನಿಗೆ, ನೀರನ್ನು ನಾರಾಯಣನಿಗೆ ಸತ್ಯವನ್ನು ಈಶ್ವರನಿಗೆ ಸಮೀಕರಿಸಿ ಹೇಳಲಾಗಿದೆ. ಉತ್ಪತ್ತಿ ಮತ್ತು ಲಯ ಎರಡರಲ್ಲಿಯೂ ರಹಸ್ಯವಾದ ಅರ್ಥವಿದು. ಬಿಡಿಸಲು ಯಾರಿಂದಲೂ ಸಾಧ್ಯವಾಗಿಲ್ಲ. ಭೂಮಿಯಲ್ಲಿ ಸಕಲವನ್ನು ಭಗವಂತ ಸೃಷ್ಟಿಸಿ ಎಲ್ಲವನ್ನು ಎಲ್ಲರಿಗಾಗಿ ಅರ್ಪಿಸಿದ್ದಾನೆ. ಅಂದ ಮೇಲೆ ಎಲ್ಲರೂ ಸಮಾನರು ಎಂಬ ಅರ್ಥವನ್ನು ಸಾರಿಹೇಳಿದಂತಿದೆ ಈ ಮೇಲಿನ ಪದ್ಯ.

ಮನುಜ ಮತ ಶ್ರೇಷ್ಠ, ಮಾನವನಾಗಿ ಹುಟ್ಟಿಬಂದಿರುವುದು ನಾನಾರು ಎಂದು ತಿಳಿಯಲು, ಮನುಷ್ಯ ಹುಟ್ಟುತ್ತಲೇ ಬ್ರಹ್ಮಸ್ವರೂಪಿ. ಆದರೆ ಅವನು ಬೆಳೆಯುವ ಪರಿಸರದ ಹಿನ್ನೆಲೆಯಲ್ಲಿ ಅವನಿಗೆ ದೊರೆಯುವ ಜ್ಞಾನದ ಹಿನ್ನೆಲೆಯಲ್ಲಿ ಅವನ ವ್ಯಕ್ತಿತ್ವ ರೂಪಗೊಳ್ಳುತ್ತದೆ. ಧಾರ್ಮಿಕ ಕ್ಷೇತ್ರದಲ್ಲೆಲ್ಲ ಅದ್ವೈತ ತತ್ವಕ್ಕೆ ವಿಶೇಷವಾದ ಸ್ಥಾನವಿದೆ. ಇಲ್ಲಿ ಶಿವ ಮತ್ತು ಜೀವ ಒಂದೇ ಎಂದು ಹೇಳಲಾಗುತ್ತದೆ. ನಾನೇ ಬ್ರಹ್ಮಸ್ವರೂಪಿ ಎಂಬ ಅದ್ವೈತವನರಿದು, ಭವರೋಗದಿಂದ ಪಾರಾಗಲು ಮಾನವ ಜನ್ಮಕ್ಕೆ ಬಂದಿರುವೆ ಎಂಬ ಸಾರವನ್ನು 'ಆರೂಢ' ಪರಂಪರೆಯ ಶರಣರು ರೂಢಿಸಿಕೊಂಡಿದ್ದಾರೆ. ಈ ನಿಟ್ಟಿನಲ್ಲಿ ನಮ್ಮ ಧರ್ಮಕಲ್ಯಾಣದ ಗುಂಡಬಸವಣ್ಣ ಹೊರತಾಗಿಲ್ಲ.

''ಇದ್ದ ಕ್ರಿಯದ ತೀರ್ಥ ಅಬದ್ಧವೆಂದೆಂದರೆ
ಗುದ್ದಾಡಲೀಬೇಕು ನೀವು
ಅದ್ವೈತದ ಅರ್ಥವ ನೋಡಿ ಆನಂದಿಸಿದವರೊಳಗೆ
ಬದ್ಧದ ಎರವು ಬೇಡ
ಸಾಧ್ಯವಹುದು ಕ್ರಿಯಾಸತ್ಯದಲಿ ನಡೆದರಿಗೆ
ಅನಗೇನು ಫಲವು
ದ್ವೈತದ ಸಖಿಯಲ್ಲಿದ್ದ ಕ್ರಿಯೆಗೆಸಲ್ಲ
ಬದ್ದೆಯಾ ಮಾಗುಂಡ ಕಲ್ಯಾ''[೭]

ಇಲ್ಲಿ ದ್ವೈತದ ಅರ್ಥವನ್ನು ನೋಡಿ ಆನಂದಪಡುವರಲ್ಲಿ ಇರುವಂತಹ ಆನಂದ ನಿತ್ಯ ಪರಿಪೂರ್ಣವಾದದ್ದು. ಈ ಆನಂದವನ್ನು ಅನುಭವಿಸುವಂತಹ ವ್ಯಕ್ತಿಯು ಪರಿಪೂರ್ಣತೆಯನ್ನು ಹೊಂದಿದವನಾಗಿರಬೇಕು. ದ್ವೈತ ಎರಡೆಂಬ ಭಾವ ಗುಣವಿದ್ದಲ್ಲಿ ಸುಖಿಯಾಗಿರಲು ಸಾಧ್ಯವಿಲ್ಲ. ಇಂತಹ ದ್ವೈತಭಾವವನ್ನು ಬಿಟ್ಟು ಏಕೋಭಾವದಿಂದ ಗುಂಡಬಸವನಿಗೆ ವಂದಿಸಿ ಎಂದು ಬಿನ್ನಯಿಸಲಾಗಿದೆ.

ಕಲ್ಯಾಣ ಪರಂಪರೆಯಲ್ಲಿ ಶೈವಧರ್ಮದ ವಿಚಾರ ಎದ್ದುಗಾಣುವುದು ವಿಶೇಷ ಸಂಗತಿಯಾಗಿದೆ. ಧರ್ಮಕಲ್ಯಾಣ ಪರಿಸರದಲ್ಲಿಯೂ ಸಹ ಅಂತಹ ವಿಚಾರ ಮಂಡನೆ ಬರುವುದನ್ನು ಕಾಣುತ್ತೇವೆ. ಇಲ್ಲಿ ಶೈವಧರ್ಮದಲ್ಲಿ ಇರುವಂತಹ ಭಾಗವನ್ನು ಆಗಮದಲ್ಲಿ ಉಲ್ಲೇಖಿತವಾಗಿದೆ ಎಂದು ಹೇಳಲಾಗುತ್ತದೆ. ಆಗಮ ವಾಕ್ಯಗಳ ನುಡಿಸಾರುವ ಪರಿಯಲ್ಲಿ ನಾಲ್ಕು ಶೈವವೆಂಬ ವಿಚಾರ ಇಂತಿದೆ.

''ನಾಲ್ಕು ಶೈವವೆಂದು ನುಡಿಯುತಿಹ ಆಗಮದ
ವಾಕ್ಯಗಳ ಕೇಳಿನ್ನು ಆದಿ ಸ್ಥಿತಿಯು
ಏಕಮಯವಾಗಿ ಹುಟ್ಟಿತು ಬ್ರಹ್ಮಾಂಡವು ಅಂದು
ಆಕಾಶ ಲಿಂಗ ಭೂಮಿಯೆ ಪೀಠಕ
ಈ ಕ್ರಮದಿ ಪೂರ್ವಶೈವವಾಗಿ ವರ್ತಿಸೆ ಅ
ನೇಕ ಕಾಲದ ಮೇಲೆ ಶುದ್ಧ ಶೈವ
ಭೂಕ್ಷೇತ್ರವಾಗಿ ಪರ್ವತ ರಾಶಿ ನೇಪಾಳ ಪಿ
ನಾಕಿ ನಾಮದ ಸ್ಥಾವರಗಳಾದವು''

''ಮಾರ್ಗಶೈವವೆಂದು ಮತ್ತೆ ಹುಟ್ಟಿತು ಕೇಳಿ
ಉಗ್ರಭಕ್ತಿಯ ಮಚ್ಚು ವಶವಲ್ಲದೆ
ಭರ್ಗನೆಂದೊಂದು ಮೂರ್ತಿಯ ಮಾಡಿ ವಂದಿಸುತ
ಶೀಘ್ರದಾಚರಣೆ ಸಂಗಡ ಬಿಡದಲಿ
ವೆಗ್ಗಳಿಸಿತದಕೆ ಅಂಗದಲಿ ಕಟ್ಟಿತು ಮುಂದೆ
ತಗ್ಗದಲಿ ವೀರಶೈವಾಚರಣೆಯಂ
ಮುಗ್ಗಿ ಹೋಪವ ನಾನು ಇಲ್ಲವೆಂದೆನಬಹುದು''[೧೦]

ಆಗಮದ ವ್ಯಾಖ್ಯೆಗಳ ಪ್ರಕಾರ ನಾಲ್ಕು ಶೈವವೆಂದು ತಿಳಿಯಬಹುದು. ಪೂರ್ವಶೈವ, ಶುದ್ಧಶೈವ, ಮಾರ್ಗಶೈವ ಮತ್ತು ವೀರಶೈವ ಎಂಬ ಆಚರಣೆಗಳು ಇವೆ ಎನ್ನುವುದನ್ನು ಉಲ್ಲೇಖಿಸಲಾಗಿದೆ. ಈ ನಾಲ್ಕು ಶೈವಗಳು ಹೇಗೆ ಹುಟ್ಟಿಕೊಂಡವು ಎಂಬ ಅಂಶವನ್ನು ಸ್ಪಷ್ಟವಾಗಿ ಹೇಳಲಾಗಿದೆ. ಪ್ರಾರಂಭದಲ್ಲಿ ಬ್ರಹ್ಮಾಂಡವು ಏಕಮುಖವಾಗಿ ಉದಯಿಸಿತು. ಆಗ ಆಕಾಶಲಿಂಗವಾಗಿ ಭೂಮಿಯು ಠಕವಾಗಿ ನಿಂತಿತು. ಈ ಕ್ರಮವನ್ನು ಪೂರ್ವಶೈವ ಎಂದು ಹೇಳಲಾಗಿದೆ. ನಂತರ ಅನೇಕ ಕಾಲಗಳ ಬಳಿಕ ಶುದ್ಧಶೈವ ಹುಟ್ಟಿ ಭೂಮಿಯಲ್ಲಿ ಪವಿತ್ರ ತಾಣಗಳಾದವು. ಪ್ರಮುಖವಾಗಿ ಕಾಶಿ, ನೇಪಾಳ, ಪಿನಾಕಿ ನಾಮದ ಕ್ಷೇತ್ರಗಳಲ್ಲಿ ಸ್ಥಾವರಗಳಾದವು.

ಪೂರ್ವಶೈವ ಮತ್ತು ಶುದ್ಧಶೈವಗಳ ನಂತರದಲ್ಲಿ ಮಾರ್ಗ ಶೈವ ಹುಟ್ಟಿತು. ಈ ಮಾರ್ಗ ಶೈವದ ಪ್ರಮುಖ ಬದಲಾವಣೆ ಎಂದರೆ ದೇವರೆಂಬ ಒಂದು ಮೂರ್ತಿಯನ್ನು ಮಾಡಿ, ಉಗ್ರವಾದ ಭಕ್ತಿಯನ್ನು ಮಾಡುವ ಪದ್ಧತಿ ರೂಢಿಗೆ ಬಂದಿತು. ಈ ಆಚರಣೆ ಬಹಳ ಸಡಗರದಿಂದ ಆಚರಿಸಲಾಗುತ್ತಿದ್ದುದರ ಬಗ್ಗೆ ಉಲ್ಲೇಖವಾಗಿದೆ. ಇವೆಲ್ಲವುಗಳ ಕೇಂದ್ರವಾಗಿ ಮುಂದೆ ವೀರಶೈವ ಆಚರಣೆ ರೂಢಿಗೆ ಬಂದಿತು. ಅಂಗದಲ್ಲಿ ಲಿಂಗವನಿಟ್ಟು ಪೂಜೆಯ

ಮಾಡುವ ಪದ್ಧತಿ ರೂಢಿಗೆ ಬಂದಿತೆಂದು ಹೇಳಲಾಗಿದೆ. ಈ ನಾಲ್ಕು ಶೈವಗಳ ಮೂಲ ಸ್ಥಾನಗಳಾಗಿ, ವಿಭೂತಿ, ರುದ್ರಾಕ್ಷಿ, ತೀರ್ಥ ಮತ್ತು ಪ್ರಸಾದವೆಂದು ನಾಲ್ಕು ಆಚರಣೆಗಳು ಇವೆ. ಹೀಗೆ ವೀರಶೈವ ಧರ್ಮದ ನಾಲ್ಕು ಬಗೆಯ ಆಚರಣೆಗಳನ್ನು ಈ ಸ್ವರವಚ ಸ್ಪಷ್ಟವಾಗಿ ಬಿಂಬಿಸಿದೆ.

ವೀರಶೈವ ಧರ್ಮದಲ್ಲಿ ವಿಭೂತಿಗೆ ವಿಶೇಷ ಸ್ಥಾನಮಾನವಿದೆ. ಸ್ವರವಚನದ ಒಂದು ಪದ್ಯದಲ್ಲಿ (೨೨ನೇ ಪದ್ಯ) ಸುದೀರ್ಘವಾಗಿ ವಿಭೂತಿಯ ಮಹತ್ವವನ್ನು ಹೇಳಲಾಗಿದೆ.

''ಪಾಪಕೆ ವಿಭೂತಿ ಪುಣ್ಯಕೆ ವಿಭೂತಿ
ಪಾಪಕೆ ವಿಭೂತಿ ಹರಕೆಗೆ ವಿಭೂತಿ
ಕೋಪಕೆ ವಿಭೂತಿ ಶಾಂತಕೆ ವಿಭೂತಿ
ಈ ಪರಿ ಎಲ್ಲಕೆ ವಿಭೂತಿ

ಸ್ವಾಮಿಯ ಕರದಾಧಾರ ವಿಭೂತಿಯು
ಕಾಮನ ಸುಟ್ಟೆಬ್ಬಿಸಿದ ವಿಭೂತಿಯು
ತಾಮಸ ಕಾಲನವಳಿದುಳುಹಿದುದು
ಗೋಮಯ ಭಸ್ಮವು ವಿಭೂತಿ
ಪ್ರೇಮದಿ ತತ್ವಮಸಿಯೆಂದೆನಿಸುವ
ಸಾಮದ ಶಬ್ದಾರ್ಥವು ವಿಭೂತಿಯು
ಕಾಮಕ್ರೋಧಗಳ ಘಟಿಸುವ ವಿಭೂತಿ
ಭೂಮಿಯ ನಿರ್ಮಿಸಿದೀ ವಿಭೂತಿ''[೪೧]

ವಿಭೂತಿಯು ಎಲ್ಲ ಕಾರ್ಯಕ್ಕೂ ಬೇಕಾದ ಪವಿತ್ರ ವಸ್ತುವಾಗಿದೆ. ಪಾಪನಿರ್ಮೂಲನೆಗೆ, ಪುಣ್ಯದ ಕೆಲಸದ ಪ್ರಾರಂಭಕೆ, ಹರಕೆಗಳನ್ನು ತೀರಿಸಲು ಕೋಪವನ್ನು ಹೋಗಲಾಡಿಸಿ ಶಾಂತಿಯು ನೆಲೆಗೊಳ್ಳಲಿಕ್ಕೆ ಈ ರೀತಿಯಾಗಿ ಎಲ್ಲ ಕೆಲಸಕೂ ವಿಭೂತಿಯು ಶ್ರೇಷ್ಠವಾಗಿದ್ದು ಶುಭ್ರತೆಯ ಸಂಕೇತವಾಗಿದೆ.

ಗುರುವಿನ ಕೈಯ ಆಧಾರ ವಿಭೂತಿಯು, ಕಾಮನನ್ನು ಸುಟ್ಟ ಈ ವಿಭೂತಿಯು ಕಾಮಾತುರರ ವಿಕೃತಗುಣಗಳನ್ನು ಹೋಗಲಾಡಿಸುವಂತದ್ದು. ಸೋಮಾರಿತನ ಗುಣವನ್ನು ಹೋಗಲಾಡಿಸಿ ಚೈತನ್ಯ ರೂಪ ಒಳಪಡುವಂತೆ ಮಾಡುವಂತಾದ್ದು. ವಿಭೂತಿ ಗೋವಿನ ಮಲದಿಂದ ಆಗಿರುವಂತಹ ಭಸ್ಮವು. ಆಧ್ಯಾತ್ಮದಲ್ಲಿ ತತ್ವಮಸಿ ಮಹಾವ್ಯಾಖ್ಯದ ಕೇಂದ್ರವಾಗಿದೆ ಈ ಭಸ್ಮ. ದೇಹ ಸುಳ್ಳು, ಈ ದೇಹ ನನ್ನದಲ್ಲ ನಾನು ಬ್ರಹ್ಮಸ್ವರೂಪಿ ಎಂಬ ಭಾವದಿಂದ ವಿಭೂತಿಯನ್ನು ಹಚ್ಚಬೇಕು ಎಂಬರ್ಥವನ್ನು ನೀಡುತ್ತದೆ. ಶಾಂತಿಯ ಸಂಕೇತ ಈ ವಿಭೂತಿಯು, ಕಾಮ ಕ್ರೋಧಗಳೆಂಬ ಅರಿಷಡ್ವರ್ಗಗಳನ್ನು ನಿಯಂತ್ರಿಸುವ ಈ ವಿಭೂತಿಯು, ಭೂಮಿಯೇ ಶಿವನು ನಿರ್ಮಿಸಿದ ವಿಭೂತಿಯಾಗಿದೆ ಎಂದು ಹೇಳಲಾಗಿದೆ. ಧಾರ್ಮಿಕ ವಿಧಿ ವಿಧಾನಗಳಲ್ಲಿ ವಿಭೂತಿಯು ತನ್ನದೇ ಆಗಿರುವಂತಹ ಸ್ಥಾನಮಾನವನ್ನು ಹೊಂದಿದೆ ಎಂಬುದಕ್ಕೆ ಈ ಮೇಲೆ ಹೇಳಿದ ಎಲ್ಲ ಉದಾಹರಣೆಗಳು ಸಾಕ್ಷಿಯಾಗಿವೆ.

ಸಮಯ ಕಲ್ಯಾಣದ ಬಸವಣ್ಣ ತನ್ನ ವಚನದಲ್ಲಿ ಹೇಳುವಂತೆ ''ಆಚಾರವೇ ಸ್ವರ್ಗ ಅನಾಚಾರವೇ ನರಕ'' ಎಂಬ ಮಾತನ್ನು ಧರ್ಮಕಲ್ಯಾಣ ಸಾಹಿತ್ಯದಲ್ಲಿಯೂ ಕಾಣುತ್ತೇವೆ.

''ಆಚಾರಲಿಂಗ ಶ್ರೀಗುರುಲಿಂಗ ಶಿವಲಿಂಗ
ಯೋಚನೆ ಮೊದಲ ಸಾಹಿತ್ಯ
ಸೂಚನೆಯ ಹೇಳಿ ಈ ಸಾಹಿತ್ಯ ಭೇದಗಳ
ರೋಚಿ ಸುಮ್ಮನೆ ಜರಿಯಬೇಡ
ಆಚಾರಲಿಂಗವೆನ್ನದೆ ಪ್ರಥಮ ಸಾಹಿತ್ಯ
ಆಚಾರ ಸತ್ಯವಿನಿತಿಲ್ಲ
ಮೋಚಿ ಭವಿಯ ಘನ ಮೊದಲ ಲಿಂಗವು ಕಳೆದು
ನಾಚೆ ನಾ ಹಗರಣದ ಭಕ್ತ''[೪೩]

ಲಿಂಗಪೂಜೆಯನ್ನು ಮಾಡಲು ನಾನು ನಾಚುವುದಿಲ್ಲ, ಲಿಂಗಾಚಾರ ನನ್ನ ಅಂಗದಲ್ಲಿಯೇ ಸೋಂಕಿರುವುದು ಎಂಬ ವಿಶಾಲಾರ್ಥದಲ್ಲಿ ಆಚಾರದ ಮಹತ್ವವನ್ನು ಕುರಿತಂತೆ ಹೇಳಲಾಗಿದೆ. ನಡೆ, ನುಡಿ ಶುದ್ಧವಾಗಿಟ್ಟುಕೊಂಡು ಜೀವನ ನಡೆಸುವಾತನಿಗೆ ಯಾವ ಬಂಧನಗಳು ಇರುವುದಿಲ್ಲ. ಆಚಾರವಂತನಾಗಲು ಮೊದಲ ಆಲೋಚನೆ ಬಹಳ ಮುಖ್ಯ. ಯಾರು ಸತ್ಯವಾಗಿದೆ ಎಂದು ತಿಳಿದು ಕಾಯಕ ಮಾಡಬೇಕು. ಅಂದಾಗ ಮೊದಲ ಸಾಹಿತ್ಯವಾಗುತ್ತದೆ ಎಂಬ ಅಂಶವನ್ನು ತಿಳಿಸಿದ್ದಾರೆ. ಆಲೋಚನಾಪರನಾಗಿರದೆ ಮತಿಹೀನನಾಗಿ ನಡೆದರೆ ಭವಿಯಾಗುವನು ಎಂದು ಹೇಳಿದ್ದಾರೆ ಸ್ವರವಚನಕಾರರು.

ಕೆಲವು ಜನರು ಲಿಂಗದ ಬಗ್ಗೆ ಶಿವಯೋಗದ ಬಗ್ಗೆ ಪದೇ ಪದೇ ಮಾತನಾಡುತ್ತಾರೆ. ಆದರೆ ಶಿವಯೋಗ ವೆಂದರೇನು ಎಂಬ ಅಂಶವನ್ನು ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

ಶಿವಯೋಗವೆಂದು ಯಾವಾಗಲಾಡುತಲಿಹೆನು
ಶಿವಯೋಗವೆಂತೆಂಬ ವಿವರನರಿಯೆ

ಹಿಡಿದ ವ್ರತಗಳ ಬಿಡದೆ ನಡೆಸುವುದು ಶಿವಯೋಗ
ನುಡಿದು ತಪ್ಪದಿರಲು ಶಿವನಯೋಗ

''ನುಡಿದಂತೆ ತಾನೀಗ ನಡೆವುದೆ ಶಿವಯೋಗ
ನುಡಿಯದಿರೆ ಹುಸಿಗಳನು ಶಿವನಯೋಗ
ನೋಡುತಿದೆ ಸರ್ವರನು ತನ್ನಂತೆ ಶಿವಯೋಗ
ಆಡುತಿದೆ ಧರ್ಮವನು ಶಿವನಯೋಗ
ಕೇಡಾಡದಿರೆ ದಯುಗಳನು ಶಿವನಯೋಗ
ಮಾಡುತಿರೆ ದಯುಗಳನು ಶಿವನಯೋಗ''[೪೪]

ಶಿವಯೋಗ ಎಂಬ ಶಬ್ದವನ್ನು ಕೇವಲ ಮಾತಿನಲ್ಲಿ ಆಡಿದರೆ ಸಾಲದು. ಶಿವಯೋಗದ ವಿವರವನ್ನು ಅರಿಯಬೇಕು ಎಂದು ಹೇಳಲಾಗುತ್ತದೆ. ಹಿಡಿದ ವ್ರತಗಳ ತಪ್ಪದ ಆಚರಿಸುವುದು ಶಿವಯೋಗ ನುಡಿದಂತೆ ನಡೆಯುವುದು ಶಿವಯೋಗ, ಒಮ್ಮೆ ಆಡಿದ ಮಾತನ್ನು ಉಳಿಸಿಕೊಳ್ಳುವುದು ಶಿವಯೋಗ. ಆಡಿದ ಮಾತಿನಲ್ಲಿ ಸುಳ್ಳು ಇರದಿದ್ದರೆ ಆದೇ ಯೋಗ, ಬೇರೆ ಜನರನ್ನು ತನ್ನಂತೆ ಎಂದು ತಿಳಿದುಕೊಳ್ಳುವುದು ಶಿವಯೋಗ, ಧರ್ಮದ

ಬಗ್ಗೆ ಯಾವಾಗಲು ಅಭಿಮಾನದಿಂದಿರುವುದೇ ಶಿವಯೋಗ ಯಾವ ಜೀವಿಗೂ ಕೇಡಾಗದಂತೆ ನಡೆದುಕೊಳ್ಳುವುದೇ ಶಿವಯೋಗ ದಯೆಯುಳ್ಳ ಕೆಲಸವನ್ನು ಮಾಡುವುದೇ ಶಿವಯೋಗ ಎಂದು ಹೇಳಿ ಶಿವಯೋಗದ ಮಹತ್ವವನ್ನು ಹೇಳಲಾಗಿದೆ. ಈ ಪದ್ಯವನ್ನು ಸಂಪೂರ್ಣ ಅವಲೋಕಿಸಿದರೆ ಹನ್ನೆರಡನೆಯ ಶತಮಾನದ ಬಸವಣ್ಣನ ವಚನಗಳ ಮಾದರಿಯಲ್ಲಿ ರಚನೆಯಾಗಿರುವುದನ್ನು ಗುರ್ತಿಸಬಹುದು. ''ಕಳಬೇಡ ಕೊಲಬೇಡ ಹುಸಿಯನುಡಿಯ ಬೇಡ'' ಎಂಬ ವಚನಗಳ ಮಾದರಿಯಲ್ಲಿ ಸ್ವರವಚನಗಳ ರಚನೆಯನ್ನು ಕಾಣುತ್ತೇವೆ.

ಹೀಗೆ ಧಾರ್ಮಿಕ ವಿಚಾರಗಳನ್ನು ಬಹಳ ಸ್ಪಷ್ಟವಾಗಿ ಹೇಳಲಾಗಿದೆ. ಸಮಯಕಲ್ಯಾಣದ ಬಸವಣ್ಣನ ವಚನಗಳ ಮಾದರಿಯಲ್ಲಿ ಸ್ವರವಚನಗಳು ರಚನೆಯಾಗಿವೆ. ಧರ್ಮವನ್ನು ಮತ್ತು ಧರ್ಮದ ತಾತ್ವಿಕ ಚಿಂತನೆಗಳನ್ನೂ ಅವುಗಳ ಸಾರವನ್ನು ಸ್ವರವಚನ ಸಾಹಿತ್ಯ ಸ್ಪಷ್ಟಪಡಿಸಿದೆ. ಗುರು, ಲಿಂಗ, ಜಂಗಮವನ್ನು ಕುರಿತಂತೆ ಅದರ ನಿಲುವುಗಳನ್ನು ಧಾರ್ಮಿಕ ಆಚಾರಗಳ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ.

ನೀತಿಬೋಧೆ

ದಾರಿ ತಪ್ಪಿ ನಡೆಯುವವರಿಗೆ ಸರಿಯಾದ ದಾರಿಯಲ್ಲಿ ನಡೆಯುವಂತೆ ಮಾಡುವುದು ನಿಜವಾದ ಧರ್ಮ, ಅಜ್ಞಾನದಿಂದ ಸರಿದಾರಿ ಬಿಟ್ಟವರಿಗೆ ಸೂಕ್ತಮಾರ್ಗ ನೀಡುವುದೇ ನೀತಿಬೋಧೆಯಾಗಿದೆ. ಸ್ವರವಚನ ಸಾಹಿತ್ಯದಲ್ಲಿ ಇಂತ ನೀತಿಯುಕ್ತ ಅಂಶಗಳು ಹೆಚ್ಚು ಕಂಡುಬರುತ್ತವೆ. ಮಾಯೆಯನ್ನು ಮೆಟ್ಟಿ ನಿಲ್ಲಬೇಕು ಎಂಬ ಅಂಶ ಎಲ್ಲ ಶಾಸ್ತ್ರಗ್ರಂಥಗಳು ಉಲ್ಲೇಖಿಸುತ್ತವೆ. ಅದೇ ಮಾದರಿಯಲ್ಲಿ ಸ್ವರವಚನಗಳಲ್ಲಿಯೂ ಸಹ ಉಲ್ಲೇಖಿತವಾಗಿದೆ.

''ಅಣವ ಮಾಯೆ ಕಾರ್ಮಿಕವೆಂಬ ರಾಗೋಲಿಂದಲಿ
ಹೊಣಿಕೆ ಆಳಿಲಿಂದೆಳಸಿ ಮತ್ತೆ ತುಳಿಸುತಲಿ
ಜಾಣತನದಿಂದ ನಿಧಿಯನಿಂತು ಒಟ್ಟುತಲಿ
ಸ್ಥಾಣುವೆಂಬ ಒಕ್ಕಲಿಗ ಮೆಟ್ಟನಿಕ್ಕುತಲಿ
ಹೆಣ್ಣು ಹೊನ್ನ ಮಣ್ಣು ಮೂರುಕಾಲು ಮೆಟ್ಟನು ಬಸ
ವಣ್ಣವೆಂಬ ಪಾಲುಗಾರ ಮೆಟ್ಟಿ ನಿಂದನು
ಹೆಣ್ಣದಾಳಿಗೆಂದ ನಿಧಿಯನಿದಿರು ತೂರುವೆನೆಂದು
ಬೆಣ್ಣೆ ಹಾಲು ಬೋದವಳಿದು ತೂರುತಿದ್ದನ''[೪]

ಅಣವಮಲ, ಕಾರ್ಮಿಕಮಲ ಮತ್ತು ಮಾಯಾ ಮಲವನ್ನು ರಂಗೋಲಿಗೆ ಹೋಲಿಸಿ ಮಲಬಂಧನ ಪಾಶದಿಂದ ಮುಕ್ತನಾಗುವ ವಿವರವನ್ನು ಹೇಳಿದ್ದಾರೆ. ಅದೇ ರೀತಿಯಾಗಿ ಹೆಣ್ಣು, ಹೊನ್ನು, ಮಣ್ಣು ಈ ಮೂರು ಮಾಯೆಯನ್ನು ಬಸವಣ್ಣ ಮೆಟ್ಟಿ ನಿಂತನು ಎಂದು ಧರ್ಮಕಲ್ಯಾಣದ ಬಸವಣ್ಣನ ನಿಷ್ಠೆಯನ್ನು ಕೊಂಡಾಡಲಾಗಿದೆ. ಬೆಣ್ಣೆ, ಹಾಲುಗಳ ಪರಿಶುದ್ಧದಂತೆ ಬಸವಣ್ಣನ ಬೋಧೆಗಳಿದ್ದವು ಎಂಬ ಅಂಶಗಳಿವೆ. ಇವೆಲ್ಲವನ್ನು ನೋಡಿದರೆ ಧರ್ಮಕಲ್ಯಾಣದಲ್ಲಿ ನಿರಂತರವಾಗಿ ನೀತಿಬೋಧನೆ ನಡೆಯುತ್ತಿದ್ದುದರ ಬಗ್ಗೆ ತಿಳಿಯಬಹುದು.

ಡಂಗುರ ಪದಗಳ ಮೂಲಕ ನೀತಿ ಜ್ಞಾನವನ್ನು ಸಾರವಾಗುತ್ತಿದ್ದ ವಿಚಾರವನ್ನು ಸ್ವರವಚನ ಸಾಹಿತ್ಯ ಉಲ್ಲೇಖಿಸುತ್ತದೆ.

“ಡಂಗುರಗಳು ಬಂದು ಸಾರುತಿವೆ ಸೊಕ್ಕಿ
ಅಂಗವಿಚ್ಛೆಗಳಿಂದ ಅಳುಕಲೊಲ್ಲೆ
ಕಂಗಾಣೆ ಕರ್ಮದ ಬಲದಿಂದಲಿ ಮುಂದೆ
ಭಗದೊಳಗಾಗಿ ಬಡಿಸಿಕೊಂಬೆ

ಕಳ್ಳಹಾದರ ನಿಂದೆಯೆಂದರಳಕೆ ಪಾಪಿ
ಹಳಿಹಂಡಿಯಾಗಿ ನಾ ಹರಿದದಕೆ
ಪ್ರಳಯವೆಂಬುದು ಬಂದು ತುಳುವುದಕೆ ಮುಂದೆ
ಉಳಿವ ಬುದ್ಧಿಗಳುಂಟೆ ಅಳಿವುದಕೆ
ಕಾಮಕ್ರೋಧ ಲೋಭ ಮೋಹ ಮದ ಮತ್ಸರವೆಂಬ
ಸೀಮೆಗೆ ಸಿಕ್ಕದಿರಿ ಉಳಿದವೆಂಬುದು
ತಾಮಸ ಬೇಡ ಗುರುಹಿರಿಯರೊಳು ಮುಂದೆ
ಸ್ವಾಮಿಗತಿಯಂದು ಎನ್ನಿ ನಿಜದಿಂದಲಿ

ತೂಕವು ಪಾಪದಲಿರೆ ಲೆಂಬೆನು ನನ್ನ
ಕಾಕುಬುದ್ಧಿಯ ಬಿಡೆ ಕಳ್ಳ ನಾನು
ಸಾಕ್ಷಿ ಡಂಗುರ ಬಂದು ಸಾರುತವಿನ್ನು ಕೇಳಿ
ಏಕಚಿತ್ತದಲಿರಿ ಉಳಿವಿರಿನ್ನು”[೪೯]

ಡಂಗುರ ಪದಗಳು ಸಾರುವ ನೀತಿಯು ಮುಂದೆ ಆಗುವಂತಹ ವಿಚಾರವನ್ನು ಹೇಳುವುದಾಗಿದೆ. ಕರ್ಮದ ಬಲದಿಂದ ಕಣ್ಣುಗಾಣದಾಗಿದ್ದಾನೆ, ಶುಭಕಾರ್ಯಗಳಿಗೆ ಭಂಗ ತಂದು ಬಡಿಸಿಕೊಂಡ ಎಂದು ಮೂಢ ಮತಿಯನ ಲಕ್ಷಣಗಳನ್ನು ಕುರಿತು ಹೇಳಲಾಗಿದೆ. ಕಳ್ಳತನ ಹಾದರ ಮಾಡುತ್ತ ನಿಂದೆಯ ನುಡಿಗಳನ್ನಾಡುತ್ತ ಸೊಕ್ಕಿನಿಂದ ನಡೆಯುತ್ತಿದ್ದೇನೆ. ಆದರೆ ಪ್ರಳಯವೆನ್ನುವುದು ಬಂದರೆ ಯಾವ ಬುದ್ಧಿಗಳು ಉಳಿಯುವುದಿಲ್ಲ ಎನ್ನುವ ವಿಚಾರವನ್ನು ಅರಿಯಬೇಕು. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಸೀಮೆಗೆ ಸಿಲುಕದೆ ದೂರವಿರಿ, ಹಾಗಾದರೆ ಮಾತ್ರ ದುರಿತ ಬಾಧೆ ಕಾಡದು. ಗುರು ಹಿರಿಯರಲ್ಲಿ ತಾಮಸ ಗುಣವನುಟ್ಟು ಅವರು ಹೇಳಿದಂತೆ ಕೇಳಿ ನಂಬಿಗೆಯಲ್ಲಿ ನಡೆಯಿರಿ ಎಂದು ಹೇಳಿದ್ದಾರೆ. ಕೆಟ್ಟ ಬುದ್ಧಿಯನ್ನು ಬಿಡದ ಕಳ್ಳನಾಮ ನನಗೆ ಸಾಕ್ಷಿಯಾಗಿ ಈಗ ಡಂಗುರ ಪದಗಳಿವೆ ಅವುಗಳನ್ನು ಕೇಳುತ್ತಾ ಉತ್ತಮ ಮನುಷ್ಯನಾಗುತ್ತೇನೆ ಎಂದು ಹೇಳಿರುವುದು ಪರಿವರ್ತನೆಯ ಹಾದಿಯನ್ನು ತಿಳಿಸುತ್ತದೆ. ಡಂಗುರ ಪದಗಳು ಹೇಳುವ ಸಾರವನ್ನು ಜನ ಅರಿಯುತ್ತಿದ್ದರು ಎಂಬ ಅಂಶ ಇಲ್ಲಿ ತಿಳಿಯುತ್ತದೆ.

ಹೆಣ್ಣಿನಿನ ರೂಪಕ್ಕೆ ಮರುಳಾಗಿ ಹಾಳಾದ ವ್ಯಕ್ತಿಯ ಚಿತ್ರಣವನ್ನು ನೀಡುತ್ತ ನೀನು ಅವರಂತೆ ಹಾಳಾಗಬೇಡ ಎಂಬ ಸಾರವನ್ನು ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

ಹೆಣ್ಣಿನಾ ರೂಪಿಗೆ ಸಿಕ್ಕಿ ಬಣ್ಣಕೆ ಮೆಚ್ಚಲು ಬೇಡ
ಕಣ್ಣುಗಾಣುತ ಶೂಲವು ನುಣ್ಣಗೆಂದು ಬೀಳಬಹುದೆ

ಮತ್ತೊಂದು ಕೇಳು ಮನವೆ ವಿಸ್ತರಿಸಿ ಹೇಳುವುದು
ಹತ್ತು ತಲೆಯ ರಾವಣ ಮತ್ತೆ ಸ್ವಾಮಿಯ
ಭಕ್ತಿಯಿಂದಲೆ ಒಲಿಸಿ ತೆತ್ತೀಸಕೋಟಿದೈವದ
ನಿತ್ಯ ಸೋಹದಲಿರುತಮಿತ್ತ ಕರೆದ ಶುದ್ದಿಯ''[೪೧]

ಹೆಣ್ಣಿನಾ ರೂಪಿಗೆ ಸಿಕ್ಕಿ ಅದರ ರೂಪಕ್ಕೆ ಮರುಳಾಗಬೇಡ ಎಂದು ಹೇಳುವ ಮೂಲಕ ಶೂಲವು ನುಣ್ಣಗಿದೆ ಎಂದು ತಿಳಿದು ನೇಣು ಹಾಕಿಕೊಳ್ಳಲಾಗುತ್ತದೆಯೇ ಎಂದು ಉಲ್ಲೇಖಿಸಲಾಗಿದೆ. ಹೆಣ್ಣಿನ ರೂಪಕ್ಕೆ ಮರುಳಾಗಿ ರಾವಣ ಹಾಳಾದ ರೀತಿಯನ್ನು ಮನಸ್ಸಿಗೆ ಹೇಳುವ ಮೂಲಕ ನೀತಿ ಬೋಧನೆ ಸಾರಲಾಗಿದೆ. ಹತ್ತು ತಲೆಯ ರಾವಣ ಭಕ್ತಿಯಿಂದ ಶಿವನ ಇಷ್ಟಲಿಂಗವನ್ನು ಪಡೆದನು. ಆದರೆ ಸೀತೆಯನ್ನು ನೋಡಿ ಮೋಹಿತನಾಗಿ ದುರಂತ ಸ್ಥಿತಿಯನ್ನು ತಂದುಕೊಂಡನು.

ದೇಹವು ರಕ್ತ, ಮಾಂಸಗಳ ಮುದ್ದೆ. ಪಂಚೇಂದ್ರಿಯಗಳ ಮಲಿನತೆಯಿಂದ ಕೂಡಿರುವಂತದ್ದು. ಯೌವನ ಎನ್ನುವುದು ಭ್ರಮೆ ಎಂಬ ಅಂಶವು ಹೀಗೆ ಮೂಡಿ ಬಂದಿದೆ.

''ಪಿತ್ತ ಶ್ಲೇಷ್ಮವು ಶುಕ್ಲವು ಅಂತ್ಯತ ರುಧಿರ ಮಾಂಸ
ಹಸ್ತಿಯ ಹಂಜರ ನರ ತೆತ್ತಿಸಿಹವು
ಮತ್ತೆ ಚರ್ಮದ ಹೊದಕೆ ಸುತ್ತ ಬರಿಯಲಿರೋಮ
ವಿಸ್ತರವಾದ ರೂಪಿನ ಸ್ಥಿತಿಯನೆಲ್ಲವ ಕೇಳು
ಶಿರಸ್ಸು ಕೀವಿನ ಭಾಂಡ ಕರ್ಣ ಕೂಗುನಿ ಕಣ್ಣು
ಬರಿಯ ಉದಕ ಮೂಗು ನೆರೆ ಸಿಂಬಳ
ದುರುವಾಸನೆಯ ಬಾಯಿ ನೆರೆದ ಮಾಂಸ ಯೌವನ
ಬರಿದೆ ಭ್ರಮಿಸಬೇಡ ಇರವೆಲ್ಲ ಕಿಸುಗಳ''[೪೨]

ಶುಕ್ಲ, ರುಧಿರ, ಮಾಂಸದಿಂದ ಅಸ್ತಿಪಂಜರದ ಹೊದಿಕೆಯೊಂದಿಗೆ ದೇಹ ನಿರ್ಮಾಣವಾಗಿದೆ. ಚರ್ಮದ ಹೊದಿಕೆಯು ಸುತ್ತುವರಿಯಲ್ಪಟ್ಟಿದ್ದು ರೋಮಗಳ ವಿಸ್ತಾರವಿದೆ. ಇಂತಿವೆಲ್ಲವುಗಳಿಂದ ರೂಪವನ್ನು ಪಡೆದಿರುವ ದೇಹ ಅವಸ್ಥೆಯು ತಲೆಯೆಲ್ಲವು ಕೀವಿನ ಕೂಪದಂತೆ, ಕಿವಿಯಲ್ಲಿ ಕೂಕಣಿಯ ಹೊಲಸು, ಕಣ್ಣಿನಲ್ಲಿ ನೀರು, ಮೂಗಿನ ಸಿಂಬಳ, ಬಾಯಿ ಪೂರಾ ದುರುವಾಸನೆ ಹೀಗೆ ಹೊಲಸಿನಿಂದ ಉಂಟಾಗಿರುವ ದೇಹದ ರೂಪಕ್ಕೆ ಭ್ರಮಿತನಾಗಿ ಯೌವನದ ಅಮಲಿನಲ್ಲಿ ಹಾಳಾಗುವ ವ್ಯಕ್ತಿಗೆ ಸರಿದಾರಿಯಲ್ಲಿ ನಡೆಯಬೇಕೆಂಬ ನೀತಿ ಬೋಧೆಯನ್ನು ಹೇಳಲಾಗಿದೆ.

ಪಂಚೇಂದ್ರಿಯದ ಇಚ್ಛೆಗೆ ಸಿಕ್ಕಿ ಹಾಳಾಗಬೇಡ ಎನ್ನುವ ನೀತಿಯ ಪದ್ಯ ಇಂತಿದೆ.

''ಒಂದೊಂದು ಇಂದ್ರಿಯಕೆ ಒಳಗಾದ ಜೀವವು
ಬಂಧನಕ್ಕೆ ಬಿದ್ದು ಬಲವಳಿದು
ಅಂದವಾಗದು ನೀನು ಅರಿತುನಡೆ ಮನವೆ ಪಂ
ಚೇಂದ್ರಿಯಂಗಳಿಚ್ಛೆಯಲಿರಬೇಡ

ಪಂಚೇಂದ್ರಿಯಂಗಳೆಲ್ಲ ಪಾಪಕಂಜದೆ ಮಲೆತು
ಮುಂಚುತಿವೆ ಮುಂದುಗಾಣದಲಿ
ಹಿಂಚು ಮೌಢ್ಯವ ಬಡಿದು ಹಿರಿದು ಜ್ಞಾನದ ಬಲಿದು
ಸಂಚ ಲೋಚನ ಸೆಟೆಯ ಜರಿದು
ಪಂಚೇಂದ್ರಿಯದಲುಳ್ಳ ಪಂಚವಿಷಯಂಗಳನು
ವಂಚಿಸದೆ ಗುರು ಸೋಹಕಿತ್ತು
ಪಂಚವದನದ ಗುಂಡಬಸವೇಶ್ವರನ ಕರುಣ
ಕಿಂಚಿತ ಕೃಪೆಯ ಪಡೆದಿಹುದು''[೪೮]

ಪಂಚೇಂದ್ರಿಯಗಳಲ್ಲಿ ಒಂದೊಂದು ಇಂದ್ರಿಯವು ವಿಷಯ ಸುಖಕ್ಕೆ ಎಳೆಯುತ್ತದೆ. ಅಂತಹ ಬಂಧನಕ್ಕೆ ಬಿದ್ದರೆ ಬಳಲಿಕೆ ತಪ್ಪಿದ್ದಲ್ಲ. ಇದನ್ನು ಅರಿತು ನೀನು ನಡೆ ಮನವೆ ಎಂದು ಹೇಳಲಾಗಿದೆ. ಪಂಚೇಂದ್ರಿಯಗಳ ಇಚ್ಛೆಯಲಿ ನೀನು ಇರಬೇಡ. ಅವು ಸುಖವನ್ನು ಮಾತ್ರ ಬಯಸುವಂತವುಗಳು. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಇವು ಕೇವಲ ಒಳ್ಳೆಯದನ್ನು ಮಾತ್ರ ಬಯಸುತ್ತವೆ. ಉದಾಹರಣೆಗೆ, ಕಣ್ಣು ಸುಂದರವಾದ ವಸ್ತುವನ್ನು ಮಾತ್ರ ಪದೇ ಪದೇ ನೋಡಬೇಕೆಂದು ಬಯಸುತ್ತದೆ. ಕಿವಿ, ಮಧುರವಾದ ಧ್ವನಿಯನ್ನು ಮಾತ್ರ ಪದೇ ಪದೇ ಕೇಳಲು ಬಯಸುತ್ತದೆ. ಮೂಗು ಸುವಾಸನೆ ಭರಿತ ವಾಸನೆಯನ್ನು ಬಯಸುತ್ತದೆ. ನಾಲಿಗೆ ರುಚಿಕಟ್ಟಾದ ಪದಾರ್ಥವನ್ನೇ ಇಚ್ಛಿಸುತ್ತದೆ. ಚರ್ಮ ಕೂಟದ ಸುಖವನ್ನು ಬಯಸುತ್ತದೆ. ಹೀಗೆ ಪಂಚೇಂದ್ರಿಯಗಳ ಸುಖಕ್ಕೆ ದಾಸನಾಗಿ ಗುರುಧ್ಯಾನವನ್ನು ಮರೆತು ಹಾಳಾಗದೆ ಧರ್ಮಕಲ್ಯಾಣದ ಪಂಚಮುಖದ ನಮ್ಮ ಗುರು ಗುಂಡಬಸವನನ್ನು ಕರುಣದಿಂದ ನೆನೆದು ಅವನ ಕೃಪೆಗೆ ಪಾತ್ರನಾಗು ಎಂದು ತಿಳಿಹೇಳಲಾಗಿದೆ.

ಶ್ರೀಮಂತಿಕೆಯಲ್ಲಿ ಮೆರೆಯುವಂತವರ ಗರ್ವವನ್ನು ದೊರೆತನಕೆ ಆಗುವ ನಂಟನ್ನು ಈ ರೀತಿ ಚಿತ್ರಿಸಲಾಗಿದೆ.

``ದೊರೆತನಕೆ ನಂಟು ಬಡತನಡೆಲ್ಲಿಯ ನಂಟು
ಹರನ ಮಾಯದ ತೊಡಕುಂಟು
ಕರೆದರೆ ಕೇಳೆನು ಮುಂದಿರಲಿಕಾಣೆನು
ಸಿರಿಯ ಗರ್ವದಲಿ ಉರಿಯುತಿಹೆನು

ಜ್ಞಾನವುಳ್ಳವರು ಸಿರಿಗುಬ್ಬರಿ ಬಡತನದ
ಹಾನಿಯೊಳು ಧರ್ಮಗಳ ಬಿಡರು
ಜ್ಞಾನಹೀನರು ಸಿರಿಯಲುರಿದು ಬಡವರನು ಅರೆ
ಕಾಣೆಗೆಯು ಲೆಕ್ಕಿಸದಲಿಹರು

ನೀನೆನ್ನನುಳುಹು ಸರ್ವೇಶ್ವರನೆ ಮರವೆಯ ಅ
ಜ್ಞಾನದಲ್ಲಿ ಮನವ ಕೆಡಗುಡದೆ
ಮಾನಭಂಗವ ಮಾಡದೆ ಸಲಹು ಗುಂಡೇಶ ಎನ್ನ
ಹಾನಿ ಒಳ್ಳಿತು ನಿಮ್ಮದಾಗಿ''[೪೯]

ಬಡತನದಲ್ಲಿ ಇರುವಾಗದ ನಂಟರೆಂದು ಯಾರೂ ಹೇಳಿಕೊಳ್ಳುವುದಿಲ್ಲ. ಅದೇ ಶ್ರೀಮಂತಿಕೆ ಇದ್ದಾಗ ಎಲ್ಲಿಲ್ಲದ ನಂಟು ಬಂದುಬಿಡುತ್ತದೆ. ಶ್ರೀಮಂತಿಕೆಯ ಮಾಯದಲ್ಲಿ ಶಿವನನ್ನು ಸಹ ಮರೆತುಬಿಡುವವರಿದ್ದಾರೆ. ಯಾರು ಮಾತನಾಡಿಸಿದರೂ ಮಾತನಾಡರು, ಸಿರಿಯ ಗರ್ವದಲ್ಲಿ ಸಾಗುತ್ತಿರುತ್ತಾರೆ. ಬಡತನವಿದ್ದವರು ಧರ್ಮದ ಹಾದಿಯನ್ನು ಬಿಡುವುದಿಲ್ಲ. ಅಜ್ಞಾನಿಗಳು ಸಿರಿತನದಲ್ಲಿ ಬೀಗುವುದು, ಬಡವರನ್ನು ಲೆಕ್ಕಿಸರು. ಧರ್ಮಕಲ್ಯಾಣದ ಸರ್ವೇಶನೇ ನೀನೇನ್ನನು ಸಲಹು. ಜ್ಞಾನದ ಮನವನ್ನು ಕೆಡಿಸಬೇಡ, ನನ್ನ ಮಾನಭಂಗವಾಗದಂತೆ ಸಲಹು ಗುಂಡೇಶ್ವರ ಎಂದು ಜ್ಞಾನವನ್ನು ನೀಡೆಂದು ಬೇಡಿಕೊಳ್ಳುತ್ತಾ, ಅಜ್ಞಾನಿಗಳಿಗೆ ತಿಳಿ ಹೇಳಿ ಸುಜ್ಞಾನಿಗಳನ್ನಾಗಿಸುವ ನಿಟ್ಟಿನಲ್ಲಿ ಸ್ವರವಚನಗಳು ಅಭಿವ್ಯಕ್ತಿಸಿವೆ.

ಧರ್ಮಕಲ್ಯಾಣದ ಪರಿವಾರದ ಸಾಹಿತ್ಯವು ವಿಶಿಷ್ಟ ರೀತಿಯಲ್ಲಿ ತಾಳ, ಲಯಬದ್ಧವಾಗಿ ರಾಗಗಳನ್ನು ಹೊಂದಿಕೊಂಡು ರಚಿಸಲ್ಪಟ್ಟಿವೆ. ಈ ಹಾಡುಗಳ ರಚನಾಕಾರನಿಗೆ ಸಂಪೂರ್ಣವಾದ ಸಂಗೀತ ಜ್ಞಾನವಿದ್ದಂತೆ ಕಂಡುಬರುತ್ತದೆ. ಪ್ರತಿ ಪದ್ಯವು ಪಲ್ಲವಿ ಮತ್ತು ಅನುಪಲ್ಲವಿಯನ್ನು ಒಳಗೊಂಡಂತೆ ರಾಗಗಳ ಹೆಸರನ್ನೂ ಸೂಚಿಸಲ್ಪಟ್ಟಿವೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಸಾರವನ್ನು ಸರಳವಾಗಿ ಜನಸಾಮಾನ್ಯರಿಗೆ ಅರ್ಥವಾಗುವ ನಿಟ್ಟಿನಲ್ಲಿ ಸ್ವರವಚನಗಳು ರಚನೆಯಾಗಿರುವುದು ಧರ್ಮಕಲ್ಯಾಣ ಸಾಹಿತ್ಯದ ವೈಶಿಷ್ಟ್ಯವಾಗಿದೆ.

**೫.೩.೨. ಡಂಗುರ ಪದ ಸಾಹಿತ್ಯ**

ಧರ್ಮಕಲ್ಯಾಣದ ಗುಂಡಬಸವೇಶ್ವರನ ಮಗನೆಂದು ಹೇಳಲಾಗುವ ಈರಪ್ಪಯ್ಯ, ತಂದೆಯ ಹಾಗೆ ಡಂಗುರ ಸಾರಿದ್ದನ್ನು ಅವನ ಕೆಲವು ಡಂಗುರ ಪದಗಳು ತಿಳಿಸುತ್ತವೆ. ಡಂಗುರ ಪದಗಳು ಮುಂದೆ ಆಗುವಂತಹ ವಿಚಾರವನ್ನು ಹೇಳುವ ಪದ್ಯಗಳಾಗಿವೆ. ಸೃಷ್ಟಿಯಲ್ಲಿ ಎಲ್ಲ ಜೀವಿಗಳಿಗೂ ವಿಶೇಷ ಪ್ರಜ್ಞೆ ಎನ್ನುವುದು ಇರುತ್ತದೆ ಎನ್ನುವುದನ್ನು ಭೂಕಂಪ ಸಂಭವಿಸುವುದಕ್ಕೆ ಮುನ್ನ ನಾಯಿ ಬೊಗಳುವುದನ್ನು ಸುನಾಮಿ ಸಂಭವಿಸುವುದಕ್ಕೆ ಮುನ್ನ ಜಲಚರಗಳು ಸುರಕ್ಷಿತ ಸ್ಥಗಳಿಗೆ ಹೋಗುವುದನ್ನು ಕೇಳಿದ್ದೇವೆ. ಅದೇ ರೀತಿ ದಿವ್ಯಜ್ಞಾನಿಗಳಾದ ಮಾನವರಿಗೂ ಮುಂದೆ ನಡೆಯುವಂತಹ ಸಂಗತಿ ಮೊದಲೇ ತಿಳಿದು ಪದಗಳ ಮೂಲಕ ಸಾರುತ್ತಿದ್ದರು. ಅದಕ್ಕೆ ಕಾಲಜ್ಞಾನ ಹೇಳುವುದು, ಡಂಗುರ ಸಾರುವುದು ಎಂತೆಲ್ಲ ಕರೆಯಲಾಗುತ್ತದೆ. ಧರ್ಮಕಲ್ಯಾಣದ ಪರಿವಾರದಲ್ಲಿ ಡಂಗುರ ಪದಗಳು ಹೆಚ್ಚು ದೊರೆಯದಿದ್ದರೂ ಸಿಕ್ಕಿರುವ ಪದಗಳು ಬಹಳ ವಿಶೇಷತೆಯಿಂದ ಕೂಡಿವೆ.

ನಾಗಾವಿ ಪರಿವಾರದವರಲ್ಲಿ ಈರಪ್ಪಯ್ಯನ ಡಂಗುರ ಪದಗಳು ಮಾತ್ರ ಸಿಕ್ಕಿವೆ. ಇವುಗಳನ್ನು ಶಿವಾನಂದ ಎಸ್ ವಿರಕ್ತಮಠ ಅವರು 'ವಚನ-ಸ್ವರವಚನ' ಎಂಬ ಕೃತಿಯಲ್ಲಿ ಸಂಪಾದಿಸಿದ್ದಾರೆ. ಈ ಡಂಗುರ ಪದಗಳು ಕಾಲಜ್ಞಾನವನ್ನು ಹೇಳಿದವರು ಯಾರು ಎನ್ನುವ ವಿಷಯವನ್ನು ಹೀಗೆ ಅಭಿವ್ಯಕ್ತಿಸಿದೆ.

ಇನ್ನು ನೋಡು ಲೋಕದಾಟ ಕಣ್ಣತುಂಬ ನೀನು
ಸಣ್ಣ ಮಾತನಾಡದಿರು ಸಾಯಬ್ಯಾಡಿ ಸತ್ಯಕಾಲ ಒದಗಿ ಬಂತು

ದೊಡ್ಡಶರಣರು ಕೂಡಿ ಕಾಲಜ್ಞಾನವ ಮಾಡಿ
ವಡ್ಡೆಯರೆಂದು ಉಡಿಯ ತುಂಬಿ

ಗುಡ್ಡದಂತ ನಿಬ್ಬಣವು ಕದಲಿ ನಡೆಯಲು
ಒಡ್ಡಿದ ಮೋಡದ ತೆರವಿ ದಕ್ಷಿಣದವರೆದ್ದು ನಡೆಯೆ
ದೊಡ್ಡ ಕೆರೆಬಾವಿಗಳು ಅರತು ತುಂಬಿ
ದುಡ್ಡಿಗೊಮ್ಮನ ಧಾನ್ಯವಾಗಿ''[೫೦]

ಭೂಮಿಯಲ್ಲಿ ಎಲ್ಲವು ಆಟದಂತೆ, ಎಲ್ಲ ಜೀವಿಗಳ ಅವರವರ ಪ್ರವೇಶ ಬಂದಾಗ ನಟನೆ ಮಾಡುವಂತೆ ಲೋಕದಾಟ ಎಂಬ ಭಾವದಿಂದ ಲೋಕದಾಟ ಕಣ್ಣತುಂಬ ನೋಡಿ ಎಂದು ಹೇಳಲಾಗಿದೆ. ಸತ್ಯಕಾಲ ಮುಂದೆ ಬರುತ್ತದೆ. ಸಣ್ಣಮಾತುಗಳನ್ನು ಆಡಬೇಡಿರಿ ಎಂದು ತಿಳಿಹೇಳಿದ್ದಾರೆ.

ಕಾಲಜ್ಞಾನವನ್ನು ದೊಡ್ಡ ಶರಣರು ಕೂಡಿ ಮಾಡಿದ್ದಾರೆ ಎಂದು ಹೇಳಿರುವುದನ್ನು ನೋಡಿದಾಗ ತನ್ನ ಗುರು ಪರಂಪರೆಯ ಸ್ಮರಣೆಯನ್ನು ಮಾಡಿದಂತೆ ತೋರುತ್ತದೆ. ಗುಡ್ಡದಂತೆ ನಿಬ್ಬಣವು ಕದಲಿ ನಡೆಯಲು ಎಂದರೆ ಬಸವಕಲ್ಯಾಣದಲ್ಲಿ ಆದಂತಹ ಕ್ರಾಂತಿಯನ್ನೂ ಮತ್ತು ದಕ್ಷಿಣದ ಕಡೆಗೆ ಬಂದ ಗುಂಪು ಚದುರಿ ಹೋದದ್ದನ್ನು ಸ್ಮರಿಸಿದಂತಿದೆ. ಕಾಲಜ್ಞಾನಿಗಳು ಹಿಂದಿನದನ್ನು ಉದಾಹರಣೆ ನೀಡುತ್ತ ಮುಂದೆ ಆಗುವಂತಹ ವಿಚಾರಗಳನ್ನು ಹೇಳುತ್ತಿದ್ದರೆಂದು ತಿಳಿಯುತ್ತದೆ.

ವಿಜಯಕಲ್ಯಾಣದ ಹಂಪಿ ಹಾಳಾದ ವಿವರಣೆಯನ್ನು ಈ ಕೆಳಗಿನ ಪದ್ಯ ಸಾರಿದಂತಿದೆ.

''ಎಲಿಯ ಒಳಗೆ ಉಂಬುವವರಿಗೆ ವ್ಯಾಳೆವು ಬಂದಿತೆಂದು
ಹೇಳಬಂದೆ ನಾಲ್ಕು ದಿಕ್ಕಿನವರು ಕೇಳಿರೊ
ಕಾಳಗವ ಮುಂದೆ ನೋಡಿ ಬಹಳ ನಿಬ್ಬಣ ಹೊರಡುತ್ತೈತೆ
ವೀಳ್ಯವದ ಪ್ರಸ್ತ ಸಣ್ಣ ನಾಮದವನಿಂದ ಗುರುತ್ತೈತೆ

ಮದುವೆಗಾಗಿ ಮಲೀಖನು ಉತ್ತರದಿಂದ ಹೊರಟುಸಾಗಿ
ಇದಿರುಗೊಂಡು ಹಂಪಿಯಲ್ಲಿ ಹಂದರ ಹಾಕಿ
ಬಂದು ನಿಬ್ಬಣ ಇಳಿದು ಬಾಸಿಂಗ ಸೂಡಿ ಭೂಮಗಳನು
ರಾಮ ತೋಂಟ ಅಷ್ಟದಿಕ್ಕಿನವರು ಕೂಡಿ ಉಣ್ಣುತ್ತಾರೆ''[೫೧]

ಇಲ್ಲಿಯ ಎಲಿಯ ಒಳಗೆ ಉಂಬುವರು ಎಂದರೆ ಬಡವರನ್ನು ಉದ್ದೇಶಿಸಿ ಹೇಳಿದಂತೆ, ಸಾಮಾನ್ಯ ಜನರಿಗೆ ಕೇಡಿನ ಕಾಲ ಬಂದಿತೆಂದು ನಾಲ್ಕು ದಿಕ್ಕಿನ ಜನರನ್ನು ಎಚ್ಚರಿಸಿದಂತಿದೆ. ಒಮ್ಮೆ ಕಾಳಗವಾಯಿತು ಎಂದರೆ ಜನಸಾಮಾನ್ಯರ ಬದುಕು ಬಹಳ ದುಗರ್ಮವಾಗುತ್ತಿತ್ತು ಎಂಬ ಭಾವ ಅಭಿವ್ಯಕ್ತಿಸಲಾಗಿದೆ. ಉತ್ತರದಿಂದ ಮಲಿಖನು ಮದುವೆಗಾಗಿ ಹಂಪೆಗೆ ಬರುತ್ತಾನೆ ಎಂಬುದರ ಭಾವ ಹಂಪಿಯ ಸಂಪತ್ತನ್ನು ಕೊಳ್ಳೆ ಹೊಡೆದ ಉತ್ತರ ಭಾಗದ ಅರಸರನ್ನು ಕುರಿತು ಹೇಳಿದಂತಿದೆ. ಹಂಪಿಯ ಅಪಾರ ಸಂಪತ್ತನ್ನು ಎಂಟು ದಿಕ್ಕಿನವರೂ ಕೂತು ಊಟ ಮಾಡಿದರೆಂದು ಬರುವುದರಿಂದ ಕಾಲಜ್ಞಾನ ಹಿಂದಿನ, ಇಂದಿನ ಮತ್ತು ಮುಂದಿನ ವಿಚಾರವನ್ನು ತಿಳಿಸುವ ಜ್ಞಾನವಾಗಿತ್ತು ಎಂದು ತಿಳಿಯಬಹುದು.

ಊರಿಗೆ ಕೇಡು ಬಂದೊದಗುವ ದುಸ್ಥಿತಿಯ ಒಂದು ಪದ್ಯ ಈ ರೀತಿ ಇದೆ.

''ಎದ್ದು ಬಿಡಿಸಿತದೊ ಮಕ್ಕಳಿರಾ ಭೂಮಿ
ಹದ್ದು ಕಾಗಿಗಳು ಹರಕೊಂಡು | ತಿಂಬಾಗ
ಎದ್ದೋಡ ದಿನ ಬಂತು ಮಕ್ಕಳಿರಾ

ಊರಿಗೆ ಉಳಿವಿಲ್ಲ ಮಕ್ಕಳಿರಾ ಮುಂದೆ
ಕೇರಿಗೆ ಜಯವಿಲ್ಲೊ ಮಕ್ಕಳಿರಾ
ತಲೆಯ ಮೇಗಿನ ಕೋರಿ ಕಸಗೊಂಡು | ಹೋಪಾಗೆ
ಅತ್ತತ್ತು ಸತ್ತೀರೊ ಮಕ್ಕಳಿರಾ

ಹಳ್ಳಿ ಪಳ್ಳಿಗಳು ಮಕ್ಕಳಿರಾ ಮುಂದೆ
ಕೊಳ್ಳಿ ಬೆಳಗಾದಾವು ಮಕ್ಕಳಿರಾ
ಕಳ್ಳರು ಅಳಿದಾರು ಸುಳ್ಳರು ಸುಟ್ಟಾರು | ಮುಂದೆ
ಒಳ್ಳೇರು ಉಳಿದಾರು ಮಕ್ಕಳಿರಾ

ಬಂಡೀಲಿ ಬಂದೀರಿ ಮಕ್ಕಳಿರಾ ನೀವು
ದಂಡವ ಕೊಳ್ಳಿರೊ ಮಕ್ಕಳಿರಾ
ಕಂಡಲ್ಲಿ ನುಸುಳಿದರೆ ಕುಂಡಿ ಮೇಲೇರಿದರು | ನೀವು
ಬಂಡೆದ್ದು ಹೋದಿರೊ ಮಕ್ಕಳಿರಾ

ಎತ್ತು ಗೋಣಿಯ ತಕ್ಕೊಂದು ಮಕ್ಕಳಿರಾ ನೀವು
ಬತ್ತಲೆ ಹೋದಿರೊ ಮಕ್ಕಳಿರಾ
ಕತ್ತಿಯವರು ಬಂದು ಕಸಗೊಂಡು ಹೊವಗೆ ಮುಂದೆ
ಅತ್ತತ್ತು ಸತ್ತಿರೊ ಮಕ್ಕಳಿರಾ''[illegible]

ಪ್ರಕೃತಿಯು ತನ್ನ ಸಮತೋಲನವನ್ನು ಕಾಪಾಡಿಕೊಳ್ಳುತ್ತದೆ ಎಂಬಂತೆ ಒಳ್ಳೆಯದು ಉಳಿಯುತ್ತದೆ ಕೆಟ್ಟದು ಬಹಳ ದಿನ ಉಳಿಯುವುದಿಲ್ಲ ಎಂಬ ಅರ್ಥವನ್ನು ಮೇಲಿನ ಪದ್ಯ ಸಾರುತ್ತದೆ. ಆಪತ್ತು ಬಂದೊದಗಿದರೆ ವಿನಾಶ ತಪ್ಪಿದ್ದಲ್ಲ ಎಂಬ ಅರ್ಥವಿದೆ. ಸಂಪತ್ತನ್ನು ಗಳಿಸಿಟ್ಟರೂ ಅದನ್ನು ಕಸಿದುಕೊಂಡು ಹೋಗುವ ವ್ಯಕ್ತಿ ಬರುತ್ತಾನೆಂದು ಸಾರಿ ಸಾರಿ ಹೇಳಲಾಗಿದೆ.

ಈ ಎಲ್ಲ ಡಂಗುರ ಪದಗಳನ್ನು ಈರಪ್ಪಯ್ಯನೇ ಬರೆದಿರುವನೆಂಬುದಕ್ಕೆ ಆಧಾರವಿದೆ. ಕೊನೆಯ ಒಂದು ಡಂಗುರ ಪದ್ಯದಲ್ಲಿ ತಾನೇ ಹೇಳಿಕೊಂಡಿದ್ದಾನೆ. ಅದು ಇಂತಿದೆ.

''ದಕ್ಷಿಣಕೆ ನಾಗಾವಿಪುರದ ಗುರುಭದ್ರ
ಪಶ್ಚಿಮಕೆ ತಾಬಂದು ಬೆರೆದ ಒಂದು
ವಾಕ್ಯ ಬಸವಪ್ಪಯ್ಯಗೊಲಿದ
ಸಾಕ್ಷಾತ ಈರಪ್ಪಯ್ಯ ತಾಬಂದು ಬೆರೆದ''[illegible]

ನಾಗಾವಿ ಪುರದ ಗುರು ಬಸವಪ್ಪಯ್ಯ ಗೊಲಿದ ಈರಪ್ಪಯ್ಯನೆಂದರೆ ಗುಂಡಬಸವೇಶ್ವರ ಮಗ ಈರಪ್ಪಯ್ಯನೆಂದು ಸ್ಪಷ್ಟವಾಗುತ್ತದೆ. ಈರಪ್ಪಯ್ಯನ ಗದ್ದಿಗೆಯು ನಾಗಾವಿಯಲ್ಲಿ ಇಂದಿಗೂ ಸಹ ಪೂಜೆಗೊಳ್ಳುತ್ತಿದೆ. ಈರಪ್ಪಯ್ಯನು ಗುಂಡಬಸವನ ಅಂಕಿತದಲ್ಲಿ ಸ್ವರವಚನಗಳನ್ನೂ ಮತ್ತು ಡಂಗುರ ಪದಗಳನ್ನು ಬರೆದು ಧರ್ಮಕಲ್ಯಾಣ ಪರಂಪರೆಯ ಸಾಹಿತ್ಯವನ್ನು ಭದ್ರಗೊಳಿಸಿದನೆಂದು ಹೇಳಬಹುದು.

ಒಟ್ಟಿನಲ್ಲಿ ಧರ್ಮಕಲ್ಯಾಣದ ಸಾಹಿತ್ಯ ಸಮಯಕಲ್ಯಾಣ, ವಿಜಯಕಲ್ಯಾಣ, ಕಡೆಯಕಲ್ಯಾಣಗಳ ಸಾಹಿತ್ಯದಂತೆ ತನ್ನದೇ ಆದ ಸಾಹಿತ್ಯಕ ಪರಿಧಿಯನ್ನು ಒಳಗೊಂಡಂತೆ ಜನಸಾಮಾನ್ಯರಿಗೂ ಅರ್ಥವಾಗುವಂತೆ ರಚಿಸಲ್ಪಟ್ಟಿದೆ. ಧರ್ಮಕಲ್ಯಾಣ ಸಾಹಿತ್ಯದಲ್ಲಿ ಸಮಯಕಲ್ಯಾಣದ ಕಾಠಿಣ್ಯತೆ, ವಿಜಯಕಲ್ಯಾಣ ಜಟಿಲತೆ, ಕಡೆಯಕಲ್ಯಾಣದ ಮಡಿವಂತಿಕೆ ಇಲ್ಲ. ಇಲ್ಲಿ ಎಲ್ಲ ವಿಷಯದ ಸ್ಪಷ್ಟ ಸರಳ ಶೈಲಿಯಿಂದ ಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿವೆ. ಸ್ವರವಚನಗಳು ಹಾಡಲು ಬಹಳ ಸರಳವಾಗಿರುವುದರಿಂದ ಭಜನಾ ಪದಗಳಾಗಿಯೂ, ತಂಬೂರಿ ಪದಗಳಾಗಿಯೂ ಹಾಡಲು ಯೋಗ್ಯವಾಗಿವೆ ಎಂದು ಅನಿಸುತ್ತದೆ.

### ೫.೪. ಸಾಲೋಟಗಿ ಶಿವಯೋಗಿ

ಇಂದಿನ ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನಲ್ಲಿರುವ ಒಂದು ದೊಡ್ಡಗ್ರಾಮ ಸಾಲೋಟಗಿ, ಸಾಲೋಟಗಿಯಲ್ಲಿ ಶಿವಯೋಗೀಶ್ವರರ ದೇವಾಲಯ ಇಂದು ಬಹಳ ಪ್ರಸಿದ್ಧಿಯನ್ನು ಪಡೆದಿದೆ. ಈ ಶಿವಯೋಗಿ ಮೂಲತಃ ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಸನ್ನತಿ ಎಂಬ ಗ್ರಾಮದಲ್ಲಿ ಜನಿಸಿದನು ಎಂದು ಸಿದ್ಧಲಿಂಗ ಕವಿ ರಚಿಸಿದಂತಹ 'ಶ್ರೀ ಶಿವಯೋಗೀಶ್ವರ ಚರಿತಾಮೃತ' ಎಂಬ ಪುರಾಣ ಕಾವ್ಯದಲ್ಲಿ ಉಲ್ಲೇಖಿತವಾಗಿದೆ.

> ಶಿವನೇ ಶ್ರೀ ಶಿವಯೋಗಿವರನಾ
> ಮವ ಧರಿಸಿ ಸನ್ನತಿಗೆ ಬಂದನು
> ಯುವತಿ ಹೊನ್ನಮ್ಮಳಿಗೆ ಸೋಮೇಶ್ವರನು ಕೃಪಿಯಾದ"

ಶಿವನೇ ಕೈಲಾಸದಿಂದ ಇಳಿದು ಶಿವಯೋಗಿಯಾಗಿ ಹೊನ್ನಮ್ಮ ಎಂಬುವಳ ಹೊಟ್ಟೆಯಲ್ಲಿ ಜನಿಸಿದನೆಂದು ಮತ್ತು ಸೋಮೇಶ್ವರನ ಕೃಪೆಯಲಿ ಎಂದಿರುವುದರಿಂದ ಸೋಮೇಶ್ವರ ಗುರುಗಳಾಗಿರುವ ಸಾಧ್ಯತೆಗಳಿವೆ.

ಧರ್ಮಕಲ್ಯಾಣ ಪರಂಪರೆಯ ಪ್ರಭಾವ ಶಿವಯೋಗಿಗೆ ಆಗಿದೆ ಎಂದು ಹೇಳಲು ಅವನು ರಚಿಸಿರುವ ಸಾಹಿತ್ಯದಿಂದ ಗೊತ್ತಾಗುತ್ತದೆ. ಧರ್ಮಕಲ್ಯಾಣ ಪರಿವಾರದವನೆಂದು ಹೇಳಬಹುದಾದ ಈರಪ್ಪಯ್ಯನ ಡಂಗುರ ಪದಗಳ ಮಾದರಿಯಲ್ಲಿ ಶಿವಯೋಗಿಯು ಡಂಗುರ ಪದಗಳನ್ನು ರಚಿಸಿದ್ದಾನೆ. ಕೆಲವು ಸ್ವರವಚನ ಮಾದರಿಯಲ್ಲಿ ರಚನೆಯಾಗಿವೆ. ಗುಂಡಬಸವಣ್ಣ ಮತ್ತು ಸಾಲೋಟಗಿಯ ಶಿವಯೋಗಿಯು ಹುಟ್ಟಿದ ಸ್ಥಳಗಳು ಸ್ವಲ್ಪ ಅಂದರೆ ಹದಿನೆಂಟು, ಇಪ್ಪತ್ತು ಕಿ.ಮೀ ಅಂತರದಲ್ಲಿ ಇರುವುದರಿಂದ ಪರಸ್ಪರ ಒಬ್ಬರಿಗೊಬ್ಬರ ಭೇಟಿಯಾದಂತೆ ಕಂಡುಬರುತ್ತದೆ. ನಾಗಾವಿಯ ಧರ್ಮಕಲ್ಯಾಣ ಪರಿಸರದಲ್ಲಿ ಶಿವಯೋಗಿಯು ಸಂಚರಿಸಿ ಅದರ ಪ್ರಭಾವಕ್ಕೆ ಒಳಗಾದನೆಂದು ಹೇಳಬಹುದಾಗಿದೆ.

**ಟಿಪ್ಪಣಿಗಳು**

೧. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ.ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪು.xxi

೨. ಅದೇ, ಪು. ೩೬

೩. ಅದೇ, ಪು. ೫೬

೪. ಅದೇ, ಪು. ೫೭

೫. ಅದೇ, ಪ್ರಸ್ತಾವನೆ, ಪು. xix

೬. ಅದೇ, ಪು. ೧೧೦

೭. ಅದೇ, ಪು. ೧೧೦

೮. ಸ್ವರವಚನಗಳು (ಸಂ), ಡಾ.ಬಿ.ಆರ್.ಹಿರೇಮಠ, ಪದ್ಯ ೩೪

೯. ಅದೇ, ಪದ್ಯ ೪೮

೧೦. ಅದೇ, ಪದ್ಯ ೫೪

೧೧. ಅದೇ, ಪದ್ಯ ೩೪

೧೨. ಗುಂಡಬಸವೇಶ್ವರ ಚರಿತ್ರೆ (ಸಂ), ಎಂ.ಎಂ.ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪು.೧೩೩

೧೩. ಸ್ವರವಚನಗಳು (ಸಂ), ಡಾ.ಬಿ.ಆರ್.ಹಿರೇಮಠ, ಪದ್ಯ ೩೪

೧೪. ಸ್ವರವಚನಗಳು (ಸಂ), ಡಾ.ಬಿ.ಆರ್.ಹಿರೇಮಠ, ಪದ್ಯ ೩೪

೧೫. ಏಳುನೂರಾ ಎಪ್ಪತ್ತೇಳು ಎಂದರೆ ಧರ್ಮದ ಪುನರುತ್ಥಾನಕ್ಕಾಗಿ ಏಳುನೂರಾ ಎಪ್ಪತ್ತೇಳು ವರ್ಷಗಳಿಗೊಮ್ಮೆ ಶರಣರು ಅವತರಿಸುತ್ತಾರೆಂಬ ಬಲವಾದ ನಂಬಿಕೆ ಪ್ರಚಲಿತದಲ್ಲಿತ್ತು. ಈ ಏಳುನೂರಾ ಎಪ್ಪತ್ತು ಎಂಬುದು ವೀರಶೈವ ಧಾರ್ಮಿಕ ಪರಿಭಾಷೆಯ ಪ್ರಸಿದ್ಧ ಸಂಖ್ಯೆ ಏಳುನೂರಾ ಎಪ್ಪತ್ತು ಆವರಣಗಳು, ಏಳುನೂರಾ ಎಪ್ಪತ್ತು ವಚನಗಳು, ಏಳುನೂರಾ ಎಪ್ಪತ್ತು ವರ್ಷಗಳು ಎಂಬ ಹೇಳಿಕೆಯನ್ನು ಇಲ್ಲಿ ಅವಶ್ಯವಾಗಿ ಗಮನಿಸಬೇಕು.

೧೬. ಸ್ವರವಚನಗಳು (ಸಂ), ಡಾ.ಬಿ.ಆರ್.ಹಿರೇಮಠ, ಪದ್ಯ ೫೩

೧೭. ಅದೇ, ಪುಟ ೬೨

೧೮. ವಚನ ಸ್ವರವಚನ, (ಸಂ), ಶಿವಾನಂದ ಎಸ್. ವಿರಕ್ತಮಠ, ಪುಟ ೪೨೫

೧೯. ಸ್ವರವಚನಗಳು (ಸಂ), ಡಾ.ಬಿ.ಆರ್.ಹಿರೇಮಠ ಪ್ರಸ್ತಾವನೆ, ಪುಟ ೨೫

೨೦. ಅದೇ, ಪುಟ.೨೫

೨೧. ಹಿರೇಮಠ.ಬಿ.ಆರ್., ಸ್ವರವಚನಗಳು, (ಸಂ), ಪದ್ಯ-೫

೨೨. ಅದೇ, ಪದ್ಯ-೧೦

೨೩. ಅದೇ, ಪದ್ಯ-೮

೨೪. ಅದೇ, ಪದ್ಯ-೩೯

೨೫. ಅದೇ, ಪದ್ಯ-೪೦

೨೬. ಅದೇ, ಪದ್ಯ-೪೬

೨೭. ಅದೇ, ಪದ್ಯ-೫೦

೨೮. ಅದೇ, ಪದ್ಯ-೫೯

೨೯. ಅದೇ, ಪದ್ಯ-೬೦

೩೦. ಅದೇ, ಪದ್ಯ-೧೧

೩೧. ಅದೇ, ಪದ್ಯ-೨೮

೩೨. ಅದೇ, ಪದ್ಯ-೨೮

೩೩. ಅದೇ, ಪದ್ಯ-೩೩

೩೪. ಅದೇ, ಪದ್ಯ-೫೩

೩೫. ಅದೇ, ಪದ್ಯ-೨

೩೬. ಅದೇ, ಪದ್ಯ-೩

೩೭. ಅದೇ, ಪದ್ಯ-೩

೩೮. ಅದೇ, ಪದ್ಯ-೧೧

೩೯. ಅದೇ, ಪದ್ಯ-೧೧

೪೦. ಅದೇ, ಪದ್ಯ-೨೧

೪೧. ಅದೇ, ಪದ್ಯ-೨೨

೪೨. ಅದೇ, ಪದ್ಯ-೨೭

೪೩. ಅದೇ, ಪದ್ಯ-೪೪

೪೪. ಅದೇ, ಪದ್ಯ-೧೯

೪೫. ಅದೇ, ಪದ್ಯ-೧೯

೪೬. ಅದೇ, ಪದ್ಯ-೩೮

೪೭. ಅದೇ, ಪದ್ಯ-೩೮

೪೮. ಅದೇ, ಪದ್ಯ-೪೩

೪೯. ಅದೇ, ಪದ್ಯ-೫೧

೫೦. ಶಿವಾನಂದ ಎಸ್.ವಿರಕ್ತಮಠ, (ಸಂ), ಸ್ವರವಚನ, ಪುಟ ೪೨೪

೫೧. ಅದೇ, ಪುಟ ೪೨೪

೫೨. ಅದೇ, ಪುಟ ೪೨೫

೫೩. ಅದೇ, ಪುಟ ೪೨೬

೫೪. ಮಲ್ಲಮ್ಮ ವಾಲಿ, (ಸಂ), ಶ್ರೀ ಶಿವಯೋಗೀಶ್ವರ ಚರಿತಾಂಮೃತ, ಪುಟ ೨

* * *

## ಧರ್ಮಕಲ್ಯಾಣ ಮತ್ತು ಕಲ್ಯಾಣಪರಂಪರೆ

ಹನ್ನೆರಡನೆಯ ಶತಮಾನದಲ್ಲಿ ಶಿವಶರಣರಿಂದ ನಡೆದ ಧಾರ್ಮಿಕ, ನೈತಿಕ, ಸಾಮಾಜಿಕ ಕ್ರಾಂತಿಯು ಮಾನವ ಜೀವಿತದ ಹಾಗೂ ಕನ್ನಡ ನಾಡಿನ ಇತಿಹಾಸದಲ್ಲಿಯೇ ವೈಶಿಷ್ಟ್ಯಪೂರ್ಣವಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ವಿಶ್ವದ ಸಮಸ್ತ ಗೋಚರ ಅಗೋಚರ ವ್ಯಾಪಾರಗಳಿಗೆ ಕಾರಣವಾದ ಅಮೂರ್ತ ಚೈತನ್ಯವನ್ನು ಇಷ್ಟಲಿಂಗ ರೂಪದಲ್ಲಿ ಪೂಜಿಸಿ, ಅರ್ಪಣಾಭಾವದಿಂದ ಕಾಯಕವನ್ನಾಚರಿಸಿ ಸಂಪೂರ್ಣ ನೀತಿಯುತವೂ, ಅಹಿಂಸಾಪೂರ್ಣವೂ ಆದ ಪರಮ ಪವಿತ್ರ ಜೀವನವನ್ನು ನಡೆಸಿದರು. ಅಷ್ಟಾವರಣ, ಷಟ್‌ಸ್ಥಲಗಳ ದಿವ್ಯ ಮಾರ್ಗದಲ್ಲಿ ಮುಂದುವರಿದು ಲಿಂಗಾಂಗ ಸಾಮರಸ್ಯದಿಂದ ಪರಿಪೂರ್ಣ ಮಾನವರಾಗುವುದೇ ಶರಣ ಧರ್ಮದ ಆದರ್ಶ ಎಂದು ನಂಬಿ ಬಾಳಿ ತೋರಿಸಿದರು. ಈ ಶರಣರ ಒಂದು ಸಂಪ್ರದಾಯವೇ ಹುಟ್ಟಿಕೊಂಡು ಅಧ್ಯಾತ್ಮದ ಆತ್ಯಂತಿಕ ಆನಂದವನ್ನು ಸವಿಯುತ್ತಿದ್ದರು. ಸಾಮಾನ್ಯ ಜನರು ಜಾತಿಭೇದವನ್ನು ತೊರೆದು ಕಾಯಕ ಶ್ರದ್ಧೆಯಿಂದ ಬಸವಣ್ಣ ಹಾಕಿಕೊಟ್ಟ 'ಕಾಯಕವೇ ಕೈಲಾಸ' ಎಂಬ ತತ್ವವನ್ನು ಪಾಲಿಸಿ ಮುಕ್ತಿಗೆ ಹಂಬಲಿಸಿದರು.[7] ಈ ಶರಣ ಸಂಪ್ರದಾಯವು ಕಲ್ಯಾಣ ಕ್ರಾಂತಿಯಿಂದಾಗಿ, ಬಸವಣ್ಣ ಐಕ್ಯವಾಗುವ ಮೂಲಕ ಅಂತ್ಯ ಕಂಡಿತು. ಮುಂದೆ ಈ ಶರಣರ ಆದರ್ಶ ಬದುಕನ್ನು, ಆಚಾರ ವಿಚಾರಗಳನ್ನು ರೂಪಿಸಿಕೊಂಡು, ಆದರ್ಶ ಬದುಕನ್ನು ರೂಪಿಸಿಕೊಂಡದ್ದು ಹಂಪಿಯ ವಿಜಯಕಲ್ಯಾಣ ಪರಂಪರೆ, ದಿಗ್ಗಿಯ ಅಮರಕಲ್ಯಾಣ ಪರಂಪರೆ, ನಾಗಾವಿಯ ಧರ್ಮಕಲ್ಯಾಣ ಪರಂಪರೆ ಹಾಗೂ ಕೊಡೇಕಲ್ಲಿನ ಕಡೆಯಕಲ್ಯಾಣ ಪರಂಪರೆ.

ಕಲ್ಯಾಣ ಪರಂಪರೆಯಲ್ಲಿ ಬಸವಕಲ್ಯಾಣ(ಸಮಯಕಲ್ಯಾಣ)ದ ಆದರ್ಶಗಳಾದ ಭೌತಿಕ ಅಂಶಗಳು, ಸಾಮಾಜಿಕ ಅಂಶಗಳು, ಧಾರ್ಮಿಕ ಅಂಶಗಳು ಹಾಗೂ ಸಾಹಿತ್ಯಕ ಅಂಶಗಳನ್ನು ಒಳಗೊಂಡಂತೆ ಅನೇಕ ಆಚರಣೆಗಳು, ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣ ಪರಂಪರೆಗಳು ಮುಂದುವರಿಸಿಕೊಂಡು ಬಂದವು. ಸಮಯಕಲ್ಯಾಣದ ಅಂಶಗಳು ಕಲ್ಯಾಣ ಪರಂಪರೆಯು ಬೆಳೆದುಬಂದ ಬಗೆಯನ್ನು ಈ ಕೆಳಗಿನಂತೆ ತಿಳಿಯಬಹುದು.

* ಭೌತಿಕ ಅಂಶಗಳು
* ಸಾಮಾಜಿಕ ಅಂಶಗಳು
* ಧಾರ್ಮಿಕ ಅಂಶಗಳು
* ಸಾಹಿತ್ಯಕ ಅಂಶಗಳು

ಈ ನಾಲ್ಕು ಅಂಶಗಳು ಕಲ್ಯಾಣ ಪರಂಪರೆಯ ಮೇಲೆ ಬೀರಿದ ಸಾಮ್ಯತೆಯನ್ನು ಮತ್ತು ಬದಲಾವಣೆಯನ್ನು ಈ ಕೆಳಗಿನಂತೆ ವಿವರಪೂರ್ಣವಾಗಿ ತಿಳಿಯಬಹುದು.

* ಭೌತಿಕ ಅಂಶಗಳು

ಇಂದಿನ 'ಬಸವಕಲ್ಯಾಣ' ಕಲ್ಯಾಣ ಚಾಲುಕ್ಯರ ಕಾಲದಲ್ಲಿ ರಾಜಧಾನಿಯಾಗಿ ಮೆರೆದಿರುವಂತದ್ದು. ಸಂಸ್ಕೃತ ವಿದ್ವಾಂಸ ವಿಜ್ಞಾನೇಶ್ವರ ತನ್ನ ಕೃತಿ 'ಮಿತಾಕ್ಷರ'ದಲ್ಲಿ ಕಲ್ಯಾಣದಂತಹ ಪಟ್ಟಣ ಪ್ರಪಂಚದಲ್ಲಿಯೇ ಇರಲಿಲ್ಲ ಎಂದು ಈ ರೀತಿ ಹೇಳಿದ್ದಾನೆ. "ನಾಸಿಹಸ್ತಿ ಭವಿಷ್ಯತಿ ಕ್ಷಿತಿಜವೆ ಕಲ್ಯಾಣ ಕಲ್ಪಂಪುರಮ್" ಎಂದು ಬಣ್ಣಿಸಿರುವುದನ್ನು ನೋಡಿದರೆ, ವಿಕ್ರಮಾದಿತ್ಯನ ಆಳ್ವಿಕೆಯ ಆ ಅವಧಿಯಲ್ಲಿ ಅವನ ರಾಜಧಾನಿಯಾದ ಕಲ್ಯಾಣ ಪಟ್ಟಣಕ್ಕೆ ಸರಿಸಾಟಿಯಾಗುವ ಯಾವ ಪಟ್ಟಣವೂ ಆಗ ಭಾರತದಲ್ಲಿ ಇರಲಿಲ್ಲವೆಂದು ಹೇಳಬೇಕಾಗುತ್ತದೆ. ಕರ್ನಾಟಕವನ್ನು ಏಕಚಕ್ರಾಧಿಪತ್ಯದಿಂದ ಆಳಿದ ಕಲ್ಯಾಣ ಚಾಲುಕ್ಯ ಅರಸುಮನೆತನದ ಸುಪ್ರಸಿದ್ಧ ದೊರೆ ಆರನೆಯ ವಿಕ್ರಮಾದಿತ್ಯನು (೧೦೭೬-೧೧೨೬) ಕಲ್ಯಾಣಪಟ್ಟಣವನ್ನು ಪ್ರಸಿದ್ಧಿಗೊಳಿಸಿದ್ದನ್ನು ನೋಡಿದರೆ, ರಾಜಧಾನಿಯನ್ನು ಅಚ್ಚುಕಟ್ಟಾಗಿ ಇಟ್ಟಿದ್ದರ ಭೌತಿಕ ಸೌಂದರ್ಯ ಪ್ರಜ್ಞೆಯ ಅರಿವು ಇದ್ದುದನ್ನು ತಿಳಿಯಬಹುದು.[೨]

ಬಿಜ್ಜಳನ ಆಳ್ವಿಕೆಯ ಕಾಲದಲ್ಲಿ ಬಸವಣ್ಣ ಮಂತ್ರಿಯಾಗಿ ಯಶಸ್ವಿಯಾಗುವುದರ ಜೊತೆಗೆ ಭಕ್ತಿಯ ಭಂಡಾರಿ ಎನಿಸಿಕೊಂಡ. ಕಲ್ಯಾಣ ನಗರದಲ್ಲಿ ವೀರಶೈವ ಧರ್ಮದ ಆಚರಣೆಗಳು ಇತರ ಜನಾಂಗದವರ ಆಚರಣೆಗಳಿಗೆ ಮಾದರಿಯಾದವು. ಸಮಾನತೆಯು ವಿಸ್ತರಿಸಿತು. ಬಹುತೇಕ ಜನರು ಲಿಂಗಪೂಜೆಯನ್ನು ಮಾಡಲು ಪ್ರಾರಂಭಿಸಿದರು. ಇವೆಲ್ಲವುಗಳ ಕಾರಣದಿಂದಾಗಿ ಸಮಯಕಲ್ಯಾಣದಲ್ಲಿ ಗುಡಿ-ಗುಂಡಾರಗಳು ಹೆಚ್ಚಾದವು. ಶರಣರ ಸಂಖ್ಯೆ ಹೆಚ್ಚಿದಂತೆಲ್ಲ ಗದ್ದುಗೆಯ ಪೂಜೆಯು ಪ್ರಾಧ್ಯಾನತೆಯನ್ನು ಪಡೆಯಿತು. 'ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕೆ ಅಳಿವಿಲ್ಲ' ಎಂಬ ತತ್ವದ ಆಧಾರದ ಮೇಲೆ ನಡೆದರೂ ಸಹ ಶರಣರು ಐಕ್ಯವಾದ ಮೇಲೆ ಅವರ ಗದ್ದುಗೆ ನಿರ್ಮಿಸಿ ಅವರನ್ನೇ ಆರಾಧನೆ ಮಾಡುವ ಜನ ಹೆಚ್ಚಾದರು. ಹೀಗಾಗಿ ಸಮಯಕಲ್ಯಾಣದಲ್ಲಿ ಗದ್ದುಗೆಯನ್ನು ಗರ್ಭಗುಡಿಯನ್ನಾಗಿಸಿಕೊಂಡ ಗುಡಿ, ಗೋಪುರಗಳು ನಿರ್ಮಾಣವಾದವು. ಈ ಕಾಲದ ಶರಣರು ಗವಿಗಳ ಮಾದರಿಯ ಪ್ರದೇಶದಲ್ಲಿ ವಾಸ ಮಾಡಿರುವುದನ್ನು ಕಾಣುತ್ತೇವೆ. ಭೌತಿಕವಾಗಿ ಪ್ರಕೃತಿ ನಿರ್ಮಾಣವಾದಂತಹ ಗುಡಿ ಮಾದರಿಯ ಗವಿ ಸಂಸ್ಕೃತಿ ಬೆಳೆದು ಬಂದಿರುವುದನ್ನು ಸಮಯಕಲ್ಯಾಣದ ಭೌತಿಕ ಅಂಶವಾಗಿ ಪರಿಗಣಿಸಬಹುದು.

ಸಮಯಕಲ್ಯಾಣದ ಈ ಎಲ್ಲ ಭೌತಿಕ ಅಂಶಗಳು ಮುಂದಿನ ಹಂಪಿ ವಿಜಯಕಲ್ಯಾಣಕ್ಕೆ ಮುಂದುವರಿಕೆಯಾಗಿ ಹದಿನಾಲ್ಕು-ಹದಿನೈದನೇ ಶತಮಾನದಲ್ಲಿ ನೂರೊಂದು ವಿರಕ್ತರು ಹಾಗೂ ವೀರಶೈವ ಶರಣರು ಗವಿಸಂಸ್ಕೃತಿಯನ್ನು ಬೆಳೆಸಿಕೊಂಡದ್ದನ್ನು ಕಾಣಬಹುದು. ಇಂದಿಗೂ ಸಹ ಹಲವು ಶರಣರ ಹೆಸರುಗಳಿಂದ ಗವಿಯನ್ನು ಗುರುತಿಸಲಾಗುತ್ತದೆ. ಉದಾಹರಣೆಗೆ ಹಂಪಿಯಲ್ಲಿರುವ ಮಾಲ್ಯವಂತ ನೂರೊಂದು ವಿರಕ್ತರ ಗವಿ, ಚಾಮರಸನ ಹುಗೇಶ್ವರ ಆಶ್ರಮ, ಮಹಾಲಿಂಗದೇವರ ಗವಿ ಹಂಪಿ, ಮಾತಂಗ ನೂರೊಂದು ವಿರಕ್ತರ ಗವಿ, ಹೀಗೆ ಗವಿಸಂಸ್ಕೃತಿ ಬೆಳೆದು ಬಂದಿರುವುದನ್ನು ಕಾಣುತ್ತೇವೆ.

ಭೌಗೋಳಿಕ ಮತ್ತು ಪುರಾತತ್ವ ಅವಶೇಷಗಳ ಹಿನ್ನೆಲೆಯಲ್ಲಿ ಬಸವಕಲ್ಯಾಣಕ್ಕೂ, ವಿಜಯಕಲ್ಯಾಣಕ್ಕೂ ಮತ್ತು ಅಮರಕಲ್ಯಾಣದ ದಿಗ್ಗಿಗೂ, ವಿಜಯಕಲ್ಯಾಣಗಳ ಮಾದರಿಯಲ್ಲಿಯೇ ದಿಗ್ಗಿಯಲ್ಲಿಯೂ ಗವಿಗಳಿವೆ.

ದಿಗ್ಗಿಯ ಸಂಗಮನಾಥನ ದೇವಾಲಯ ಇರುವುದೇ ಗವಿಯಲ್ಲಿ. ಧರ್ಮಕಲ್ಯಾಣವಾದ ನಾಗಾವಿಯಲ್ಲಿಯೂ ಸಹ ಗವಿ ಮಾದರಿಯ ಗದ್ದುಗೆ ಇರುವುದನ್ನು ನೋಡಬಹುದಾಗಿದೆ. ಗುಂಡಬಸವಣ್ಣ ಮತ್ತು ತಿಪ್ಪಣ್ಣಯ್ಯರ ಗದ್ದುಗೆಯ ಕೆಳಗಡೆ ಗವಿ ಇದೆಯೆಂದು ಪ್ರತೀತಿ ಇದೆ. ಕಲ್ಯಾಣ ಪರಂಪರೆಯ ಕೊನೆಯ ಭಾಗವಾದ ಕೊಡೇಕಲ್ಲಿನಲ್ಲಿಯೂ ಸಹ ಕೊಡೇಕಲ್ ಬಸವಣ್ಣನ ಗದ್ದಿಗೆಯು ವಿಶೇಷವಾಗಿದ್ದು, ಪ್ರಾಕೃತಿಕ ಪರಿಸರ ಉಳಿದ ಕಲ್ಯಾಣ ಮಾದರಿಯನ್ನು ಹೋಲುತ್ತದೆ.

ಹನ್ನೆರಡನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗೆ ಕಲ್ಯಾಣ ಪರಂಪರೆಯು ಭೌತಿಕ ಅಂಶಗಳನ್ನು ಒಳಗೊಂಡಂತೆ ಮುಂದುವರಿದು ಧಾರ್ಮಿಕ ಪ್ರಮುಖ ಕೇಂದ್ರಗಳಾಗಿ ಜನೋದ್ಧಾರ ಕೇಂದ್ರಗಳಾಗಿ ಪರಿಗಣಿಸಲ್ಪಟ್ಟವು.

* ಸಾಮಾಜಿಕ ಅಂಶಗಳು

ಸಮಯಕಲ್ಯಾಣದಲ್ಲಿ ಜಾತಿ-ಮತ, ಭೇದ-ಭಾವವನ್ನು ಹೋಗಲಾಡಿಸಲೆಂದೇ ಎಲ್ಲ ಶರಣರು ಶ್ರಮಿಸಿದರು. ಅಂದು 'ಶರಣ' ಎನ್ನುವ ಪದಕ್ಕೆ ಬೆಲೆಕೊಟ್ಟು ಎಲ್ಲರೂ ಬಾಳಿದರು. ಸಮಾಜದಲ್ಲಿ ಕಾಯಕದ ಶ್ರೇಷ್ಠತೆಯನ್ನು ಎತ್ತಿಹಿಡಿದು ಜಾತಿ-ಭೇದದಿಂದ ಮುಕ್ತರಾಗಿದ್ದರು. ಅಂತರಂಗದ ಶುದ್ಧಿಗಾಗಿ ಪಣತೊಟ್ಟವರಾಗಿದ್ದರು. ಕೀಳುಮಟ್ಟದ ಕೆಲಸವೆಂದು ಹೇಳಲಾಗುವ ಸೂಳೆಗಾರಿಕೆಯನ್ನು ಪವಿತ್ರ ಕಾಯಕವೆಂದು ನಂಬಿಕೊಂಡು ಬಂದ ವರ್ಗದವರೂ ಸಾಹಿತ್ಯ ರಚನೆ ಮಾಡಿದ್ದನ್ನು ಸೂಳೆಸಂಕವ್ವೆಯ ವಚನಗಳನ್ನು ನೋಡಿದರೆ ತಿಳಿಯುತ್ತದೆ. ಹರಳಯ್ಯ ಚೆನ್ನಯ್ಯರಂತಹವರನ್ನು, ಬಸವಣ್ಣ ತಂದೆಯ ಸಮಾನವಾಗಿ ಕಾಣುತ್ತಿದ್ದನ್ನು ನೋಡಿದರೆ ಸಮಯ ಕಲ್ಯಾಣದ ಸಾಮಾಜಿಕ ಅಂಶಗಳು ಮುಂದಿನ ಕಲ್ಯಾಣ ಪರಂಪರೆಗೆ ಆದರ್ಶಪ್ರಾಯವಾಯಿತು.[8]

ವಿಜಯಕಲ್ಯಾಣದ ಸಂದರ್ಭದಲ್ಲಿ ಪ್ರೌಢದೇವರಾಯನ ಆಶ್ರಯದಲ್ಲಿ ನೂರೊಂದು ವಿರಕ್ತರನ್ನು ಒಳಗೊಂಡಂತೆ ಹಲವಾರು ಶರಣರು ಸಮಾಜಕ್ಕೆ ಆದರ್ಶಪ್ರಾಯರಾದರು. ಸಮಯಕಲ್ಯಾಣವು ಸಾರಿದ ಸಮಾನತೆಯ ಅಂಶಗಳನ್ನು ಆಚರಣೆಗೆ ತಂದುದರ ಜೊತೆಗೆ ಇತರರಿಗೂ ಮಾದರಿಯಾದರು. ವಿಜಯಕಲ್ಯಾಣದಲ್ಲಿನ ಆದರ್ಶಗಳನ್ನೇ ಮುಂದೆ ಅಮರಕಲ್ಯಾಣದಲ್ಲಿ ಕಾಣುತ್ತೇವೆ. ದಿಗ್ಗಿಯಲ್ಲಿಯೂ ಸರ್ವಧರ್ಮೀಯರು ಸಮಾನತೆಯಿಂದ ಹಬ್ಬ-ಹರಿದಿನಗಳನ್ನು ಆಚರಿಸುವುದನ್ನು ಕಾಣುತ್ತೇವೆ. ಧರ್ಮಕಲ್ಯಾಣದಲ್ಲಿ ಸಾಮಾಜಿಕ ಜೀವನದ ಚಿತ್ರಣವನ್ನು ಗುಂಡಬಸವೇಶ್ವರ ಚರಿತ್ರೆಯಲ್ಲಿ ಕಾಣುತ್ತೇವೆ. ಸಮಯಕಲ್ಯಾಣದಲ್ಲಿ ಪ್ರಸಿದ್ಧಿಯನ್ನು ಪಡೆದಿರುವಂತಹ ವ್ಯಕ್ತಿಗಳೆಂದರೆ, ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ ಇತ್ಯಾದಿ, ಪರಂಪರೆಯ ಮುಂದುವರಿಕೆಯಲ್ಲಿಯೂ ಇವರ ಹೆಸರುಗಳೇ ಕಂಡುಬರುವುದು ವಿಶೇಷವಾಗಿದೆ. ಸಮಯಕಲ್ಯಾಣದ ಬಸವಣ್ಣ ಇಲ್ಲಿ ಗುಂಡಬಸವನೆಂದು ಮತ್ತು ಅಲ್ಲಮಪ್ರಭುವನ್ನು ಗುಂಡಬಸವಣ್ಣನ ಮಗನಾಗಿ ಗುರುತಿಸಲಾಗಿದೆ. ಇಲ್ಲಿ ತಿಳಿದುಬರುವ ಅಂಶವೆಂದರೆ ಕೇವಲ ಧರ್ಮದ ಆಚರಣೆಗಳಷ್ಟೇ ಅಲ್ಲದೆ ಅವರ ಹೆಸರುಗಳೂ ಸಹ ಪರಂಪರಾಗತವಾಗಿ ಮುಂದುವರಿದಿರುವುದನ್ನು ಕಾಣುತ್ತೇವೆ. ಧರ್ಮಕಾಲದಲ್ಲಿನ ಸಮಕಾಲೀನ ಸಾಮಾಜಿಕ ಚಿತ್ರಣವನ್ನು, ತಿಪ್ಪಣ್ಣಯ್ಯ ಮತ್ತು ಗುಂಡಬಸವಣ್ಣನವರ ಮದುವೆಯ ವಿಚಾರದ ಸಂದರ್ಭದಲ್ಲಿ

ತಿಳಿದಿದ್ದೇವೆ. ಇನ್ನು ಕಡೆಯ ಕಲ್ಯಾಣ ಪರಂಪರೆಯಲ್ಲಿಯೂ ಸಹ ಇಂತದೇ ಆಚರಣೆಗಳನ್ನು ಗುರುತಿಸಬಹುದು. ಕೊಡೇಕಲ್ ಬಸವಣ್ಣನನ್ನು ಪೂಜಿಸುತ್ತಾರೆ, ಆರಾಧಿಸುತ್ತಾರೆ. ಇವೆಲ್ಲವನ್ನು ಗಮನಿಸಿದಾಗ ಸಾಮಾಜಿಕವಾಗಿ ಸಮಯಕಲ್ಯಾಣದ ಅಂಶಗಳು ಮುಂದಿನ ಕಲ್ಯಾಣ ಪರಂಪರೆಗೂ ಮಾದರಿಯಾಯಿತೆಂದರೆ ಅತಿಶಯೋಕ್ತಿಯಾಗುವುದಿಲ್ಲ.

* ಧಾರ್ಮಿಕ ಅಂಶಗಳು

ಹನ್ನೊಂದನೆಯ ಶತಮಾನದಲ್ಲಿ ಪಾಶುಪತ, ಕಾಳಾಮುಖ, ಕಾಪಾಲಿಕ ಮತ್ತು ಶಾಕ್ತರ ನಡೆ-ನುಡಿಯ ವೈಪರೀತ್ಯ ಹಾಗೂ ವಿಷಮತೆಯಿಂದಾಗಿ ಜನತೆಯಲ್ಲಿ ಅತೃಪ್ತಿ ಉಂಟಾಗಿದ್ದಿತು. ಇದರಿಂದಲೇ ಶಿವಶರಣರು ೧೨ನೇ ಶತಮಾನದಲ್ಲಿ ಸಾಮಾಜಿಕ, ಧಾರ್ಮಿಕ ಸುಧಾರಣೆಗೆ ಕೈಹಾಕಿದರು. ಅವರು ಮೊಟ್ಟಮೊದಲು ಜನತೆಯಲ್ಲಿ ಉಚ್ಚ-ನೀಚ, ಭಾವನೆಗಳನ್ನು ತೊಡೆದು ಹಾಕಿದರು. ಯಾವ ಪಂಗಡವೇ ಇರಲಿ, ಯಾವ ಜಾತಿಯೇ ಇರಲಿ, ಲಿಂಗ ಧರಿಸಿದವರೆಲ್ಲರೂ ಸಮಾನರು. ಸ್ವಚ್ಛತೆ, ಪರಿಶುದ್ಧತೆ, ಪಾವಿತ್ರ್ಯಗಳನ್ನು ಜನರು ತಮ್ಮ ನಿತ್ಯಜೀವನದಲ್ಲಿ ಮೈಗೂಡಿಸಿಕೊಂಡರು. ಕಾಯಕತತ್ವವು ವರದಾನವಾಗಿ ಪರಿಣಮಿಸಿತು. ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ ಲಿಂಗಧಾರಿಗಳೆಲ್ಲರೂ ಸರಿಸಮಾನರಾದರು. ಜನರಲ್ಲಿ ಆತ್ಮವಿಶ್ವಾಸ ಬೆಳೆಯಹತ್ತಿತು. ಶಿವಶರಣರು ಬಸವಣ್ಣನ ಮಾರ್ಗದರ್ಶನದಲ್ಲಿ ಭಿನ್ನಭಿನ್ನ ಜಾತಿಮತಗಳ ಜನರನ್ನು ಭಕ್ತಿಪಥದ ವಲಯದಲ್ಲಿ ಬರಮಾಡಿಕೊಂಡರು. ಸಾಮಾಜಿಕ, ನೈತಿಕ ಸುಧಾರಣೆಯಿಂದಾಗಿ ಧಾರ್ಮಿಕ ವಿಚಾರಮಂಥನ ಪ್ರಬಲವಾಯಿತು. ಜನರ ದಿನದಿನದ ಬದುಕು ಬಹಳ ಉಚ್ಚಮಟ್ಟದ್ದಾಯಿತು. ಅನುಭಾವದ ಹಂತದಲ್ಲಿ ಚರ್ಚೆಗಳು ನಡೆಯಹತ್ತಿದ್ದವು. ಜನರಿಗೆ ಯೋಗ್ಯ ಮಾರ್ಗದರ್ಶನ ದೊರೆತು ಧಾರ್ಮಿಕವಾಗಿ, ಸರ್ವರೂ ಸಮಾನರಾಗಿದ್ದರು.

ಸಮಯಕಲ್ಯಾಣದಲ್ಲಿ ಆದಂಥ ಧಾರ್ಮಿಕ ಸಮಾನತೆ ಮುಂದೆ ವಿಜಯಕಲ್ಯಾಣದಲ್ಲಿಯೂ ಕಾಣುತ್ತೇವೆ. ವಿಜಯಕಲ್ಯಾಣ ಸಂದರ್ಭದಲ್ಲಿ ಹಂಪಿಯಲ್ಲಿ ಪ್ರಚಲಿತದಲ್ಲಿದ್ದ ಧರ್ಮಗಳೆಂದರೆ, (ಅ.) (ಹಿಂದೂ) ಶೈವ, ವೈಷ್ಣವ, ಶಾಕ್ತ, ಗಾರ್ಹಪತ್ಯ, ವೀರಶೈವ ಮತ್ತು ಅನೇಕ ಜಾತಿಗಳು. (ಆ.) ಜೈನ, (ಇ.) ಮುಸಲ್ಮಾನ, (ಈ.) ಬೌದ್ಧ, (ಉ.) ಕ್ರಿಶ್ಚಿಯನ್ ಈ ಧರ್ಮಗಳು ವಿಜಯನಗರ ಸಾಮ್ರಾಜ್ಯದಲ್ಲಿ ಇದ್ದವೆಂದು ತಿಳಿದುಬರುತ್ತದೆ. ಇಸ್ಲಾಂ ಧರ್ಮವು ಕರ್ನಾಟಕಕ್ಕೆ ೧೪ನೆಯ ಶತಮಾನದಲ್ಲಿಯೇ ಪ್ರವೇಶ ಮಾಡಿದರೆ, ಕ್ರಿಶ್ಚಿಯನ್ ಧರ್ಮವು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿಯೇ ತನ್ನ ಪ್ರಭಾವವನ್ನು ಬೀರಲು ಪ್ರಾರಂಭಿಸಿತು. ಈ ಎಲ್ಲ ಧರ್ಮಗಳಲ್ಲಿ ಧರ್ಮಸಹಿಷ್ಣುತೆಯನ್ನು ತರಲು ಪ್ರೌಢದೇವರಾಯ ಶ್ರಮಿಸಿದನೆಂದು ತಿಳಿಯುತ್ತದೆ.[*] ವಿಜಯಕಲ್ಯಾಣವೆಂದು ಲಕ್ಕಣದಂಡೇಶನ ಕೃತಿಯಲ್ಲಿ ವಿಜಯನಗರವನ್ನು ಕರೆದಿರುವುದನ್ನು ನೋಡಿದರೆ, ಎಲ್ಲ ರೀತಿಯಿಂದ ವಿಜಯನಗರ ಸಮೃದ್ಧಿಯನ್ನು ಪಡೆದಿತ್ತೆಂದು ತಿಳಿಯಬಹುದು. ಧಾರ್ಮಿಕವಾಗಿ ನೂರೊಂದು ವಿರಕ್ತರ ಪರಂಪರೆಯನ್ನು ಒಳಗೊಂಡಂತೆ ಅನೇಕ ಧರ್ಮೀಯರು ಸರ್ವಸಮಾನತೆಯಿಂದ ಬಾಳಿದರೆಂದು ತಿಳಿಯಬಹುದು.

ಸಮಯಕಲ್ಯಾಣ ಮತ್ತು ವಿಜಯಕಲ್ಯಾಣದಲ್ಲಿ ಧಾರ್ಮಿಕವಾಗಿ ವೀರಶೈವ ಧರ್ಮ ಹೆಚ್ಚು ಪ್ರಚಾರವಾಗಿ ಕೆಳವರ್ಗಗಳ ಜನರು ಲಿಂಗಧರಿಸುವ ಪದ್ಧತಿಯನ್ನು ರೂಢಿಸಿಕೊಂಡರು. ಆದರೆ ಅಮರಕಲ್ಯಾಣ, ಧರ್ಮಕಲ್ಯಾಣ

ಮತ್ತು ಕಡೆಯಕಲ್ಯಾಣ ಪರಂಪರೆಯಲ್ಲಿ ಸ್ವಲ್ಪ ಭಿನ್ನವಾಗಿ ತೋರುತ್ತದೆ. ಧಾರ್ಮಿಕ ಆಚರಣೆಗಳು ಯಾವುದೇ ಧರ್ಮದ ಅನಿವಾರ್ಯ ಭಾಗ. ಇಲ್ಲಿ ಅಂಥ ಕೆಲವು ಆಚರಣೆಗಳು ಎದ್ದುಕಾಣುತ್ತವೆ. ಮಠ ನಿರ್ಮಾಣ ಈ ಸಂಪ್ರದಾಯದ ಭಾಗವಾಗಿದ್ದಿತು. ಹಳೆಯ ಸಗರದ ಹೊರಗೆ (ದಿಗ್ಗಿಯಲ್ಲಿ) ಸಂಗಮನಾಥನು ಮಠ ಕಟ್ಟಿದ ಉಲ್ಲೇಖ ಎರಡು ಕಡೆ ಬಂದಿದೆ.[*] ಇದು ಅಮರಕಲ್ಯಾಣದ ಪರಂಪರೆ. ಗುಂಡಬಸವಣ್ಣ ನಾಗಾವಿಯ ಹೊರಗೆ ಮಠ ಕಟ್ಟಿಸಿ ಅದಕ್ಕೆ ಧರ್ಮಕಲ್ಯಾಣವೆಂದು ಹೆಸರಿಟ್ಟನು. ಕೊಡೇಕಲ್ಲಿನಲ್ಲಿಯೂ ಇವೇ ಮಾದರಿಯ ಮಠವಿದ್ದು ಇಂದಿಗೂ ಸಹ ಅನೇಕ ಭಕ್ತರು ಈ ಮಠಗಳಿಗೆ ಬರುತ್ತಾರೆ.

ಧಾರ್ಮಿಕವಾಗಿ ಆರೂಢ ಪರಂಪರೆಯ ಮಾದರಿಯನ್ನು ರೂಢಿಸಿಕೊಂಡವರು ಅಮರಕಲ್ಯಾಣ, ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣ ಪರಂಪರೆಯವರು. ಆರೂಢ ಪರಂಪರೆಯಲ್ಲಿ ಮಡಿ-ಮೈಲಿಗೆ ಭಾವವಿಲ್ಲದೆ ಏಕೋಭಾವದಿಂದ ಇರುವಂತದ್ದು ಸರ್ವಶ್ರೇಷ್ಠತೆಯ ನಿಲುವೆಂದು ಹೇಳಬಹುದು. ಹೀಗೆ ಧಾರ್ಮಿಕ ಆಚರಣೆಗಳು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಸಮಯಕಲ್ಯಾಣದ ಪರಂಪರೆಯನ್ನು ಮುಂದುವರಿಸಿಕೊಂಡು ಬಂದದ್ದನ್ನು ಕಾಣುತ್ತೇವೆ.

*** ಸಾಹಿತ್ಯಕ ಅಂಶಗಳು**

ಪ್ರಪಂಚದ ಬಹುತೇಕ ಭಾಷೆಗಳ ಸಾಹಿತ್ಯ ಪರಂಪರೆಯ ಪ್ರಥಮ ಘಟ್ಟದ ಸೃಷ್ಟಿಗೆ ಸಾಮಾನ್ಯವಾಗಿ ಧರ್ಮವೇ ಮೂಲ ಪ್ರೇರಕಶಕ್ತಿಯಾಗಿದೆ. ಕನ್ನಡ ಸಾಹಿತ್ಯ ಸೃಷ್ಟಿ ಪರಂಪರೆಗಳು ಈ ಮಾತಿಗೆ ಹೊರತಲ್ಲ. ಕನ್ನಡ ಸಾಹಿತ್ಯದ ತ್ರಿಪದಿ, ಚಂಪೂ, ಕಂದ, ಶತಕ, ಷಟ್ಪದಿ, ವಚನ, ಸಾಂಗತ್ಯ, ಕೀರ್ತನೆ, ಸ್ವರವಚನ ಮುಂತಾದ ಹಲವಾರು ಛಂದೋಪ್ರಕಾರಗಳ ವ್ಯಾಪ್ತಿಯನ್ನು ಪಡೆದ ಈ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಚರಿತ್ರೆಕಾರರು ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ವೈಷ್ಣವ ಸಾಹಿತ್ಯ ಎಂದು ಧರ್ಮಗಳ ಹಿನ್ನೆಲೆಯಲ್ಲಿ ಸಾಹಿತ್ಯವನ್ನು ವಿಭಾಗ ಮಾಡಿದರು.

ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಘಟ್ಟವೆಂದು ಹೇಳಲಾಗುವ ಮಧ್ಯಕಾಲೀನ ಕನ್ನಡ ಸಾಹಿತ್ಯ ಬೆಳಕಿಗೆ ಬಂದದ್ದು ವಚನ ಸಾಹಿತ್ಯದ ಮೂಲಕ. ವಚನ ಸಾಹಿತ್ಯವು ವೀರಶೈವ ಧರ್ಮದ ಆಚಾರ, ವಿಚಾರ, ಕಾಯಕತತ್ವದ ಹಿನ್ನೆಲೆಯಲ್ಲಿ ಪ್ರಬುದ್ಧತೆಯನ್ನು ಪಡೆಯುವ ಮೂಲಕ ವಿಶಿಷ್ಟತೆಯನ್ನು ಮೆರೆದಿತ್ತು. ಅಂದಿನ ಆ ಸಾಹಿತ್ಯದ ಕೇಂದ್ರ ವ್ಯಕ್ತಿಯಾಗಿ ನಿಲ್ಲುವಾತ ಸಮಯಕಲ್ಯಾಣದ ರೂವಾರಿ ಎಂದು ಹೇಳಲಾಗುವ ಕಾಯಕಯೋಗಿ ಬಸವಣ್ಣ. ಹನ್ನೆರಡನೆಯ ಶತಮಾನದ ಬಸವಣ್ಣನ ಒಂದು ದೊಡ್ಡ ಪರಿವಾರವೇ ವಚನ ಸಾಹಿತ್ಯ ರಚನೆಗೆ ತೊಡಗಿದ್ದನ್ನು ನೋಡಿದಾಗ, ಒಂದು ಪರಿವಾರದ ಬೆಳವಣಿಗೆಯಲ್ಲಿ ಸಾಹಿತ್ಯ ರಚನೆಯ ಮಹತ್ವವನ್ನು ಅರಿಯಬಹುದು.

ಸಮಯಕಲ್ಯಾಣದ ೧೨ನೆಯ ಶತಮಾನದಲ್ಲಿ ವಚನ ಸಾಹಿತ್ಯ ಪ್ರಾಮುಖ್ಯತೆಯನ್ನು ಪಡೆದಂತೆ ಹದಿನಾಲ್ಕನೆಯ ಶತಮಾನದಲ್ಲಿ ಹಂಪಿಯ ವಿಜಯನಗರದಲ್ಲಿ ಷಟ್ಪದಿ, ರಗಳೆ, ತ್ರಿಪದಿ ರೂಪದಲ್ಲಿ ಸಾಹಿತ್ಯ ರಚನೆ ನಡೆಯಿತು. ಪ್ರೌಢದೇವರಾಯನ ಕಾಲದಲ್ಲಿ ನೂರೊಂದು ವಿರಕ್ತರನ್ನು ಕುರಿತಂತೆ, ಹಂಪಿಯ ವಿರೂಪಾಕ್ಷನನ್ನು ಕುರಿತಂತೆ, ವೀರಶೈವಧರ್ಮವನ್ನು ಕೇಂದ್ರವಾಗಿಟ್ಟುಕೊಂಡು ಅಪಾರ ಪ್ರಮಾಣದಲ್ಲಿ ಸಾಹಿತ್ಯ ರಚನೆ ನಡೆಯಿತು. ಹಂಪಿಯನ್ನು, ವಿಜಯನಗರ, ಪಂಪಾನಗರ, ವಿದ್ಯಾನಗರವೆಂದು ಕರೆಯಲ್ಪಟ್ಟ ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿಯಲ್ಲಿ

"ವಿಜಯಕಲ್ಯಾಣ"ವೆಂದು ಕರೆಯಲ್ಪಟ್ಟಿದೆ. ಪ್ರೌಢದೇವರಾಯನ ಕಾಲಕ್ಕೆ ಈ ನಗರವು ಕೇವಲ 'ವಿಜಯನಗರ'ವೆಂದೆನಿಸದೆ ಬಸವಣ್ಣನ 'ಕಲ್ಯಾಣ'ವನ್ನು ಅಳವಡಿಸಿಕೊಂಡು 'ವಿಜಯಕಲ್ಯಾಣ'ವಾದುದೇ ಧರೆಗೆ. ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿಯು ಈ ಗಣ್ಯ ನಗರವನ್ನು ಹೀಗೆ ಬಣ್ಣಿಸುತ್ತದೆ.

"ಪರಹಿತದ ಬೀಡು, ಸತ್ಯದ ನುಡಿಯ ನಡನಾಡು
ಕರುಣಾಬ್ಧಿಯ ಇಕ್ಕೆ, ಕಾಮಿತಸುಖದ ತೆಕ್ಕೆ
ಶಶಿಧರನ ಸಾಮರ್ಥ್ಯದಾಗರ, ಸದಾಚಾರ ಸದ್ಭಕ್ತಿಗಳ ಜನ್ಮಭೂಮಿ
ಪರತರ ಶಿವಾನುಭಾವಿಗಳ ಪರಿಮಿತಗೃಹಂ
ಪರಿಕಿಪರಿಗಿದು 'ವಿಜಯಕಲ್ಯಾಣ'ವಾದುದು ಈ ಧರೆಯರಿಯೆ
ಇದು 'ದೇವರಾಜೇಂದ್ರಪುರ'"*

ಬಸವಣ್ಣನಿಂದ ಕಲ್ಯಾಣವು ಆಗಲೇ 'ಬಸವಕಲ್ಯಾಣ'ವೆನಿಸಿತ್ತು. ಆ ಬಸವ ಕಲ್ಯಾಣವು ಶಿವತತ್ವ ಚಿಂತಾಮಣಿಯಲ್ಲಿ ಈ ಕೆಳಗಿನಂತೆ ಬಣ್ಣಿಸಲ್ಪಟ್ಟಿದೆ.

ಇಳಾತಳಕೆ ಶುಭ ಕಲ್ಯಾಣವು
ಮನುಜರಿಗೆ ಮಂಗಳದ ಕಲ್ಯಾಣವು
ಪಾಪ ಪರಿಹಾರಕವೂ
ಭಕ್ತಿ ಸತಿಯ ವಿವಾಹ ಕಲ್ಯಾಣವು
ಪರಮ ಕೈವಲ್ಯಪದ ಕಲ್ಯಾಣವು '

ಬಸವಣ್ಣನಿಂದ ಕಲ್ಯಾಣ ಪಟ್ಟಣವು ಮಾನವ ಕುಲಕೋಟಿಯ ಕಲ್ಯಾಣವನ್ನೇ ಗಮನದಲ್ಲಿರಿಸಿಕೊಂಡಂತೆ ಪಂಪಾನಗರಿಯು ವಿಜಯವನ್ನು ಪಡೆದು 'ವಿಜಯನಗರಿ' ಎಂದು ಕರೆಸಿಕೊಂಡು ಮುಂದೆ 'ಕಲ್ಯಾಣ'ವನ್ನು ತನ್ನ ಗರ್ಭದಲ್ಲಿ ಸೇರಿಸಿಕೊಂಡು "ವಿಜಯಕಲ್ಯಾಣ" ಎಂಬ ಸಾರ್ಥಕ ಹೆಸರನ್ನು ಪಡೆದಿದೆ. ಬಸವಣ್ಣನವರ ಕ್ರಾಂತಿಯ ಪರಿಣಾಮವಾಗಿ ಕಲ್ಯಾಣ ಪಟ್ಟಣದ ಶಿವಭಕ್ತ ಸಂತತಿ, ಶ್ರೀಶೈಲ, ಹಂಪೆ, ಓರಂಗಲ್ಲು, ಉಳಿವೆ, ಮೊದಲಾದ ಶೈವಕ್ಷೇತ್ರಗಳತ್ತ ಚದುರಿ, ಅಲ್ಲಲ್ಲಿ ನೆಲೆಸಿದ್ದರಿಂದ ಹಂಪೆಯಲ್ಲಿ ಶೈವಾಚಾರ್ಯರ ಚಟುವಟಿಕೆಗಳು ಸಾಗಿ ಬಂದಂತೆ ಕಂಡುಬರುತ್ತವೆ.

ವಿಜಯಕಲ್ಯಾಣ ಪರಂಪರೆಯಲ್ಲಿ ಸಾಹಿತ್ಯ ಚಟುವಟಿಕೆಗೆ ಹೆಚ್ಚಿನ ಪ್ರಾತಿನಿಧ್ಯ ದೊರೆತದ್ದರಿಂದ ಹೆಚ್ಚಿನ ಪ್ರಮಾಣದಲ್ಲಿ ಕವಿಗಳು ಕಂಡುಬರುತ್ತಾರೆ. ಹರಿಹರ, ರಾಘವಾಂಕ, ಚಾಮರಸ, ಲಕ್ಕಣ್ಣ ದಂಡೇಶ, ಮೊಗ್ಗೆಯ ಮಾಯಿದೇವ, ನೂರೊಂದು ವಿರಕ್ತರಲ್ಲಿ ಪ್ರಮುಖರಾದ ಕರಸ್ಥಲದ ನಾಗಿದೇವ, ಹೀಗೆ ಅನೇಕರು ಹನ್ನೆರಡನೆಯ ಶತಮಾನದ ವಚನಕಾರರ ಮಾದರಿಯಲ್ಲಿ ಸಾಹಿತ್ಯ ರಚನೆ ಮಾಡಿದರು.

ಕಲ್ಯಾಣ ಪರಂಪರೆಯ ಮೂರನೆಯ ಭಾಗವಾದ ಅಮರಕಲ್ಯಾಣದಲ್ಲಿ ಸಾಹಿತ್ಯಕ್ಕೆ ಹೆಚ್ಚು ಒತ್ತುಕೊಟ್ಟಂತೆ ಕಂಡುಬರುವುದಿಲ್ಲ. ಅಮರಕಲ್ಯಾಣದ ರೂವಾರಿಯಾದ ದಿಗ್ಗಿಸಂಗಮನಾಥ ಕಲ್ಯಾಣದ ಬಸವಣ್ಣನ ಆದರ್ಶಗಳನ್ನು ಮೈಗೂಡಿಸಿಕೊಂಡು ಅಮರಕಲ್ಯಾಣವನ್ನು ಬೆಳೆಸಿದ್ದಾನೆ. ದಿಗ್ಗಿಸಂಗಮನಾಥ ಬಸವಣ್ಣನ ಆಚಾರ ವಿಚಾರ

ಮೈಗೂಡಿಸಿಕೊಂಡಿದ್ದರೂ ಸ್ವಲ್ಪ ಭಿನ್ನವಾದ ನೆಲೆಯಲ್ಲಿ ಗುರುತಿಸಿಕೊಳ್ಳುತ್ತಾನೆ. ದಿಗ್ಗಿ ಸಂಗಮನಾಥನು ವಿಶೇಷವಾದ ವ್ಯಕ್ತಿಯಾಗಿ ನಿಲ್ಲುವುದು ಅವನ ಶಿಷ್ಯ ಪರಂಪರೆಯಿಂದ. ಇವನ ಶಿಷ್ಯರಾದ "ಗುಂಡಬಸವಣ್ಣ" ಮತ್ತು "ಕೊಡೇಕಲ್ಲ ಬಸವಣ್ಣ" ಕಲ್ಯಾಣ ಪರಂಪರೆಯ ಮುಂದಿನ ರೂವಾರಿಗಳಾಗಿ "ಧರ್ಮಕಲ್ಯಾಣ" ಮತ್ತು "ಕಡೆಯಕಲ್ಯಾಣ"ವನ್ನು ನಿರ್ಮಿಸಿ ಗುರುಸಂಗಮನಾಥನನ್ನು ಅಮರವಾಗಿಸಿದ್ದಾರೆ.

ಕಲ್ಯಾಣ ಪರಂಪರೆಯ ಕಡೆಯ ಹಂತ ಕೊಡೇಕಲ್ಲಿನ "ಕಡೆಯ ಕಲ್ಯಾಣ" ಪರಂಪರೆ. ಈ ಪರಂಪರೆಯಲ್ಲಿಯೂ ಸಹ ಸಾಹಿತ್ಯಿಕ ಕೃಷಿ ಹುಲುಸಾಗಿ ಬೆಳೆದಿರುವುದನ್ನು ಕಾಣುತ್ತೇವೆ. ೧೨ನೇ ಶತಮಾನದ ಬಸವಣ್ಣ ವಚನಗಳನ್ನು ರಚಿಸಿದಂತೆ, ಕೊಡೇಕಲ್ಲು ಬಸವಣ್ಣನೂ ಸಹ ಕಾಲಜ್ಞಾನ ಸಾಹಿತ್ಯ, ನೀತಿಜ್ಞಾನ ಸಾಹಿತ್ಯ, ಸ್ವರವಚನ ಸಾಹಿತ್ಯವನ್ನು ರಚನೆ ಮಾಡಿರುವುದನ್ನು ಗಮನಿಸಬಹುದು. ಕೊಡೇಕಲ್ಲ ಪರಂಪರೆಯಲ್ಲಿ ಬಸವಣ್ಣನ ಶಿಷ್ಯ ಬಳಗದಿಂದ ಮತ್ತು ಮಗ ರಾಚಪ್ಪಯ್ಯನಿಂದ ಸಾಹಿತ್ಯ ಬೆಳೆದು ಬಂದದ್ದನ್ನು ನೋಡಬಹುದು. ರಾಚಪ್ಪಯ್ಯ ಪ್ರಭುಚರಿತೆ, ಮಾಯಾಸಾಂಗತ್ಯ, ಗಿರಿಜಾಕಲ್ಯಾಣ, ಮಹಾದೇವಿ ಅಕ್ಕನ ಸಾಂಗತ್ಯ, ಸ್ವರ್ಗಾರೋಹಣ, ಪಿಟ್ಟವ್ವೆಚರಿತ್ರೆ, ಎಯ್ದು ಮೊರೆಹೊಕ್ಕವರ ಕತೆಗಳು, ರಾಜನೀತಿ, ಸಂವಹನ ಸಾರ ಹೀಗೆ ಅನೇಕ ಕಾವ್ಯಗಳನ್ನು ರಚಿಸಿದ್ದಾನೆ. ನೀಲಮ್ಮ, ಗುಹೇಶ್ವರ ವೀರಸಂಗಪ್ಪಯ್ಯ, ಮಂಟೇಸ್ವಾಮಿಯರಿಂದಲೂ ಕೊಡೇಕಲ್ಲ ಪರಂಪರೆಯ ಸಾಹಿತ್ಯ ಬೆಳೆದದ್ದನ್ನು ನೋಡಬಹುದು. ಇವೆಲ್ಲವುಗಳ ಮಾದರಿಯಲ್ಲಿಯೇ ಧರ್ಮಕಲ್ಯಾಣ ಪರಂಪರೆಯಲ್ಲಿ ಸಾಹಿತ್ಯ ರಚನೆಯಾಗಿರುವುದನ್ನು ಕಾಣುತ್ತೇವೆ. ಗುಂಡಬಸವಣ್ಣನ ಶಿಷ್ಯ ಮತ್ತು ಮಗ ಎಂದು ಹೇಳಲಾಗುವ ಈರಪ್ಪಯ್ಯನಿಂದ ರಚಿತವಾಗಿರುವ ಸ್ವರವಚನ ಸಾಹಿತ್ಯ ಮತ್ತು ಡಂಗುರ ಪದ ಸಾಹಿತ್ಯದ ಅಂಶಗಳನ್ನು ಈ ಹಿಂದೆ ನೋಡಿದ್ದೇವೆ. ಹೀಗೆ ಕಲ್ಯಾಣ ಪರಂಪರೆಯಲ್ಲಿ ಸಾಹಿತ್ಯಿಕ ಅಂಶಗಳು ಬೆಳವಣಿಗೆಯನ್ನು ಕಂಡುಕೊಳ್ಳುತ್ತಾ ಸಮಾಜದ ಜನರನ್ನು ಪ್ರಜ್ಞಾವಂತರನ್ನಾಗಿಸಲು ಪ್ರಯತ್ನಿಸಿದರೆಂದರೆ ತಪ್ಪಾಗಲಾರದು.

**ಟಿಪ್ಪಣಿಗಳು**

೧. ಕೂಡಲೂರ ಬಸವಲಿಂಗ ಶರಣರು (ಲೇ) ಎಮ್.ಜಿ. ಶಾಸ್ತ್ರಿಮಠ, ಪುಟ ೫.

೨. ವಿಜಯಕಲ್ಯಾಣ (ಸಂ), ಸಂ. ಶಿ. ಭೂಸನೂರುಮಠ, ಪುಟ ೧೦.

೩. ಕಡಲೂರ ಬಸವಲಿಂಗ ಶರಣರು (ಲೇ) ಎಮ್.ಜಿ. ಶಾಸ್ತ್ರಿಮಠ, ಪುಟ ೬.

೪. ವಿಜಯಕಲ್ಯಾಣ (ಸಂ), ಸಂ. ಶಿ. ಭೂಸನೂರಮಠ, ಪುಟ ೬೮.

೫. ಅದೇ, ಪುಟ ೬೫.

೬. ಅದೇ, ಪುಟ ೬೫.

* * *

## ಸಮಾರೋಪ

ಮನುಷ್ಯನ ಬದುಕು ಬೆಳವಣಿಗೆ ಹಾಗೂ ವಿಕಾಸ ಹೊಂದಿದಂತೆಲ್ಲ ಅವನು ಅನೇಕ ನಿಯಮಗಳಲ್ಲಿ ಬಂಧಿಯಾಗುತ್ತಾ ಹೋಗುತ್ತಾನೆ. ಈ ಬಂಧನಗಳಿಂದ ತಪ್ಪಿಸಿಕೊಳ್ಳಲು ಅನೇಕ ಆಚರಣೆಗಳನ್ನು ರೂಢಿಗೆ ತಂದನು. ಈ ಆಚರಣೆಗಳ ರೂಢಿಯ ಕ್ರಮವೇ ಮುಂದೆ ಧರ್ಮವಾಗಿ ರೂಪಗೊಂಡವು. ಮನುಷ್ಯನಿಗೆ ಇಂದು ಧರ್ಮದ ಅರಿವು ಅವಶ್ಯಕವಾಗಿದೆ. ಇಂಥ ಅವಶ್ಯಕತೆಯನ್ನು ನೀಗಿಸಲೆಂದೇ ಅನೇಕ ಮಹಾಪುರುಷರು ಜನಿಸಿ ಧರ್ಮ ಪ್ರಚಾರದ ಜೊತೆಗೆ ಜನರ ಕಲ್ಯಾಣಕ್ಕಾಗಿ ದುಡಿದರು. ಅಂಥ ಧರ್ಮಗಳಲ್ಲಿ ಲಿಂಗಾಯತ ಧರ್ಮವು ತನ್ನದೇ ಆದ ತತ್ವಸಿದ್ಧಾಂತಗಳನ್ನು ಹೊಂದಿದ್ದು ಜನಮುಖಿಯಾಗಿರುವುದನ್ನು ಕಾಣಬಹುದು. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನ ಪರಿವಾರದವರು ಧರ್ಮದ ಅಡಿಯಲ್ಲಿ ಕಾಯಕ ತತ್ವವನ್ನು ಸೇರಿಸಿ ಕಾಯಕವನ್ನು ಪವಿತ್ರವನ್ನಾಗಿಸಿದರು. ಅಂದು ಕಲ್ಯಾಣದ ಆದರ್ಶ ಜಗತ್ತಿಗೆ ಮಾದರಿಯೆಂಬಂತೆ ಕಂಡುಬಂದಿತು. ಅಂದಿನ ಅದರ ಜನಪ್ರಿಯತೆ ಮುಂದಿನ ಕಲ್ಯಾಣ ಪರಂಪರೆಗೆ ನಾಂದಿಯಾಯಿತು. ಹೀಗಾಗಿ ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ, ಕಡೆಕಲ್ಯಾಣ ಪರಂಪರೆಗಳು ಕರ್ನಾಟಕದಲ್ಲಿ ಕಟ್ಟಲ್ಪಟ್ಟವು.

ಧರ್ಮಕಲ್ಯಾಣ ಪರಂಪರೆಯು ಬೆಳೆಯುವುದಕ್ಕಿಂತ ಪೂರ್ವದಲ್ಲಿ ನಾಗಾವಿಯು ಅಗ್ರಹಾರವಾಗಿ, ಘಟಿಕಾಲಯವಾಗಿ ಮೆರೆದಿರುವಂತದ್ದು. ಇಲ್ಲಿ ಕಲ್ಯಾಣ ಚಾಲುಕ್ಯರ ಪತನಾನಂತರ ಮುಸ್ಲಿಂ ಆಳ್ವಿಕೆಗೆ ಒಳಪಟ್ಟು ಜನವಸತಿ ಕಡಿಮೆಯಾದಂತೆ ಕಂಡುಬರುತ್ತದೆ. 'ಧರ್ಮಕಲ್ಯಾಣ' ಎಂಬ ಹೆಸರಿನಿಂದ ಗುಂಡಬಸಪ್ಪ ಮಠ ಕಟ್ಟಿ, ಜನರ ಶ್ರೇಯೋಭಿವೃದ್ಧಿಯ ಜೊತೆ ಆತ್ಮೋದ್ಧಾರಕನಾಗಿ ಜೀವಿಸಿದವನು. ಇವನ ವೈಯಕ್ತಿಕ ಜೀವನದ ಅಧ್ಯಯನದಿಂದ 'ಧರ್ಮಕಲ್ಯಾಣದ' ಸ್ಥಾಪಕ ಇವನೇ ಎನ್ನುವುದಕ್ಕೆ ಪರಿಹಾರ ಕಂಡುಕೊಳ್ಳಲಾಯಿತು. ಧರ್ಮಕಲ್ಯಾಣದ ಉಲ್ಲೇಖ ಅನೇಕ ಕೃತಿಗಳಲ್ಲಿ ಬಂದಿದ್ದರೂ, ಅದರ ಸ್ಥಾಪಕ ಯಾರು? ಎನ್ನುವ ಕೊರತೆಯನ್ನು ಪ್ರಸ್ತುತ ಈ ಅಧ್ಯಯನವು ತುಂಬಿಕೊಟ್ಟಿದೆ.

ವಚನ ಸಾಹಿತ್ಯ ಹನ್ನೆರಡನೆಯ ಶತಮಾನದ ಮನೆಮಾತಾಗಿ, ಸಮಯಕಲ್ಯಾಣದ ಕೀರ್ತಿಯನ್ನು ಜಗತ್ತಿನಾದ್ಯಂತ ಹಾರಿಸಿತು. ವಿಜಯಕಲ್ಯಾಣದಲ್ಲಿ ಕಾವ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಹುಟ್ಟಿಕೊಂಡಿತು. ಲಕ್ಕಣ್ಣ ದಂಡೇಶ, ಚಾಮರಸರಂಥ ಅನೇಕ ಕವಿಗಳ ವಿಜಯಕಲ್ಯಾಣದ ಧಾರ್ಮಿಕ ಶ್ರೇಯಸ್ಸನ್ನು ಉನ್ನತಗೊಳಿಸಿದರು. ಮುಂದಿನ ಕಲ್ಯಾಣ ಪರಂಪರೆಯಾದ ಅಮರಕಲ್ಯಾಣ ಸಾಹಿತ್ಯಕ್ಕೆ ಒತ್ತುಕೊಟ್ಟಂತೆ ಕಂಡುಬರುವುದಿಲ್ಲ. ನಂತರದಲ್ಲಿ 'ಧರ್ಮಕಲ್ಯಾಣ' ವಚನಸಾಹಿತ್ಯ ಮತ್ತು ಕಾವ್ಯ ಪ್ರಕಾರಗಳಿಗೆ ಅಲ್ಪ ಭಿನ್ನವಾಗಿ ಸ್ವರವಚನ ಸಾಹಿತ್ಯ ಮತ್ತು

ಡಂಗುರವಿನ ಸಾಹಿತ್ಯದ ಮೂಲಕ ತನ್ನದೇ ಆದಂತಹ ವೈಶಿಷ್ಟ್ಯವನ್ನು ಮೆರೆಯಿತು. ಧರ್ಮಕಲ್ಯಾಣ ಸಾಹಿತ್ಯ ಪರಂಪರೆಗೆ ಬಹುಶಃ ದಾಸ ಸಾಹಿತ್ಯ ಮತ್ತು ಕೈವಲ್ಯ ಸಾಹಿತ್ಯದ ಪ್ರಭಾವ ಆಗಿರುವಂತೆ ಕಂಡುಬರುತ್ತದೆ. ಕೈವಲ್ಯ ಪದಗಳ ಸಾರಕ್ಕೆ 'ಧರ್ಮಕಲ್ಯಾಣ' ಸ್ವರವಚನ ಸಾಹಿತ್ಯದ ಅನೇಕ ಪದ್ಯಗಳು ಹೋಲಿಕೆಯಾಗುತ್ತವೆ. ಡಂಗುರ ಪದಗಳು ಮತ್ತು ಸ್ವರವಚನ ಸಾಹಿತ್ಯದ ವಿಶಿಷ್ಟತೆಯನ್ನು ಪರಿಚಯಿಸುವುದರ ಮೂಲಕ ಕನ್ನಡ ಹಾಡುಗಬ್ಬ ಸಾಹಿತ್ಯದ ಪೂರ್ಣತೆಯನ್ನು ಕಂಡುಕೊಂಡಂತಾಗಿದೆ.

ಧರ್ಮಕಲ್ಯಾಣ ಪರಿಸರದಲ್ಲಿ ಬೆಳೆದು, ಗುಂಡಬಸವನ ಪ್ರಭಾವದಿಂದ ಪ್ರಭಾವಿತಗೊಂಡು, ಧರ್ಮಕಲ್ಯಾಣದ ಪರಂಪರೆಯನ್ನು ಬೆಳೆಸಲು ಶ್ರಮಪಟ್ಟಂತೆ ವ್ಯಕ್ತಿಗಳ ಅಧ್ಯಯನ ಮಾಡುವ ಮೂಲಕ ಈ ಪರಂಪರೆಯನ್ನು ಸಂಪೂರ್ಣ ಪರಿಚಯಿಸಿದಂತಾಗಿದೆ. ಧರ್ಮಕಲ್ಯಾಣ ಪ್ರದೇಶವಾದ ನಾಗಾವಿಯಿಂದ ಕಕ್ಕಳಮೇಲಿಯ ಪ್ರದೇಶಕ್ಕೆ ಹೋದ ಗುಂಡಬಸವಣ್ಣನ ಮಗ ಅಲ್ಲಮಪ್ರಭು ಕಲ್ಯಾಣ ಪರಂಪರೆಯನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಹಬ್ಬಿಸಿದನೆಂದು ತಿಳಿದಂತಾಗಿದೆ. ಅಲ್ಲಮಪ್ರಭುವಿನ ಗದ್ದುಗೆ ಕಕ್ಕಳಮೇಲಿಯಲ್ಲಿ ಇಂದಿಗೂ ಇದ್ದು ಪೂಜಾ ವಿಧಾನಗಳು ನಡೆಯುತ್ತವೆ. ಹೀಗೆ ಧರ್ಮಕಲ್ಯಾಣ ಪರಂಪರೆಯ ಗುಂಡಬಸವೇಶ್ವರ, ತಿಪ್ಪಣ್ಣಯ್ಯ, ಈರಪ್ಪಯ್ಯ, ಕಕ್ಕಳಮೇಲಿ ಅಲ್ಲಮಪ್ರಭು, ಸಾಲೋಟಗಿ ಶಿವಯೋಗಿಗಳು ಒಂದೇ ಸ್ಕೂಲಿನ ಅನುಭಾವಿಗಳು ಎಂಬುದನ್ನು ಪರಿಚಯಿಸಿರುವುದರಿಂದ ಅಧ್ಯಯನಕ್ಕೆ ಧರ್ಮಕಲ್ಯಾಣಕ್ಕಿರುವ ಐತಿಹಾಸಿಕ ಪರಂಪರೆಯನ್ನು ಕಟ್ಟಿಕೊಟ್ಟ ಮಹತ್ವ ಸಲ್ಲುತ್ತದೆ.

ಕಲ್ಯಾಣ ಪರಂಪರೆಯಲ್ಲಿ 'ಸಮಯಕಲ್ಯಾಣ' ಮತ್ತು 'ವಿಜಯಕಲ್ಯಾಣ' ಪರಂಪರೆಯ ಕಾಲದಲ್ಲಿ ಶರಣರ ಸಂಖ್ಯೆ ಅಪಾರವಾಗಿದ್ದು ಅದರ ಪ್ರಭಾವದಿಂದ ಸಾಮಾನ್ಯ ವರ್ಗದ ಜನರು ಲಿಂಗ ಧರಿಸುವ ಮೂಲಕ ಸಮಾನತೆ ಕಂಡುಕೊಳ್ಳಲು ಪ್ರಯತ್ನಿಸಿದರು. ಅಮರಕಲ್ಯಾಣ, ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣ ಪರಂಪರೆಯ ಆಚರಣೆ ಸ್ವಲ್ಪ ಭಿನ್ನವಾಗಿದೆ. ಇವರು 'ಆರೂಢ' ಮಾದರಿಯ ಸಂತರಾಗಿ ಬಾಳಿದವರು. ಅವಧೂತರ ನಿಲುವುಗಳನ್ನು ಹೊಂದಿದವರು. ಈ ಮೂರು ಕಲ್ಯಾಣಗಳ ಕೇಂದ್ರ ವ್ಯಕ್ತಿಯಾಗಿ ದಿಗ್ಗಿಸಂಗಮನಾಥನಾಗಿದ್ದಾನೆ. ಧರ್ಮಕಲ್ಯಾಣ ಪರಂಪರೆಯ ಗುಂಡಬಸವೇಶ್ವರ ದಿಗ್ಗಿಸಂಗಮನಾಥನನ್ನು ಗುರುವೆಂದು ಸ್ವೀಕಾರ ಮಾಡಿದ್ದನು. ಕಡೆಯಕಲ್ಯಾಣದ ಕೊಡೇಕಲ್ ಬಸವಣ್ಣನ ಗುರುವು ದಿಗ್ಗಿಸಂಗಮನಾಥನೇ ಆಗಿದ್ದಾನೆ. ಅಮರಕಲ್ಯಾಣದ ಪ್ರಭಾವ ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣಗಳ ಮೇಲೆ ಹೆಚ್ಚಾಗಿ, ದಿಗ್ಗಿಸಂಗಮನಾಥನ ಆಚರಣೆಗಳ ಪ್ರಭಾವ ಬೀರಿದೆ. ಈ ಹಿನ್ನೆಲೆಯಲ್ಲಿ ಧರ್ಮಕಲ್ಯಾಣದ ಪರಂಪರೆಯನ್ನು ಉಳಿದ ಕಲ್ಯಾಣ ಪರಂಪರೆಯೊಂದಿಗೆ ಸಮೀಕರಿಸಿ ಅಧ್ಯಯನ ಮಾಡಿರುವುದರಿಂದ ಈ ಅಧ್ಯಯನಕ್ಕೆ ವಚನಕಾರರ ಪರಂಪರೆಯನ್ನು ಪರಿವರ್ತಿಸಿ ಆಯಾಮಗಳನ್ನು ಶೋಧಿಸಿದಂತಾಗಿದೆ.

ಒಟ್ಟಿನಲ್ಲಿ ಸಮಯಕಲ್ಯಾಣ ವಚನವನ್ನು, ವಿಜಯಕಲ್ಯಾಣ ವಚನಕಾವ್ಯವನ್ನು, ಕಡೆಯ ಕಲ್ಯಾಣ ಕಾಲಜ್ಞಾನವನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿದಂತೆ ಧರ್ಮಕಲ್ಯಾಣ, ಡಂಗುರ ಪದಗಳು ಹಾಗೂ ಸ್ವರವಚನ ಸಾಹಿತ್ಯವನ್ನು ಉಳಿಸಿಕೊಂಡು ಬೆಳೆಯಿತು. ವಿಶೇಷವಾಗಿ ಸಮಯಕಲ್ಯಾಣವೆನಿಸಿದ ಬಸವಕಲ್ಯಾಣ ಕುರಿತು

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನಗಳು ನಡೆದಿವೆ. 'ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ' ಎಂಬ ಡಾ. ಡಿ.ವಿ. ಶಿವಾನಂದ ವಿಕ್ತಮಠ ಅವರ ಅಧ್ಯಯನ 'ವಿಜಯಕಲ್ಯಾಣ'ದ ಅಧ್ಯಯನವೆನಿಸಿದೆ; ಇದೇ ವಿಜಯಕಲ್ಯಾಣದ ನೂರೊಂದು ವಿರಕ್ತರರನ್ನು ಕುರಿತು ಡಾ. ಜೆ. ಕುಮಾರ ಅವರು ಡಾ. ಕೆ. ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಹಂಪಿ ವಿಶ್ವವಿದ್ಯಾಲಯಕ್ಕೆ ಪ್ರಬಂಧ ಸಲ್ಲಿಸಿದ್ದಾರೆ. 'ಕಡೆಯಕಲ್ಯಾಣ'ದ ಕೊಡೇಕಲ್ಲು ಬಸವಣ್ಣನನ್ನು ಕುರಿತು ಡಾ. ಎಂ.ಎಂ. ಕಲಬುರ್ಗಿ ಅವರ ಮಾರ್ಗದರ್ಶನದಲ್ಲಿ ಡಾ. ಬಸವಲಿಂಗ ಸೊಪ್ಪಿಮಠ ಅಧ್ಯಯನ ಪೂರೈಸಿದ್ದಾರೆ. ಇತ್ತೀಚೆಗೆ ಡಾ. ಕೆ. ರವೀಂದ್ರನಾಥ ಅವರ ಮಾರ್ಗದರ್ಶನದಲ್ಲಿ ಕುಮಾರಿ ಅನುಪಮ ವೆಂ. ಆದಾಪುರ ಅವರು ಅಮರಕಲ್ಯಾಣವಾದ ದಿಗ್ಗಿಸಂಗಮನಾಥನನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಪ್ರಸ್ತುತ ಕಿರುಪ್ರಬಂಧ ಡಾ. ಕೆ. ರವೀಂದ್ರನಾಥ ಅವರ ಧರ್ಮಕಲ್ಯಾಣವೆನಿಸಿದ ನಾಗಾವಿಯ ಅಧ್ಯಯನವಾಗಿದೆ. ಹೀಗಾಗಿ ಹೈದ್ರಾಬಾದ್ ಕರ್ನಾಟಕ ಭಾಗವಾದ ಬೀದರ್, ಶಹಾಪೂರ, ಚಿತ್ತಾಪುರ, ಸುರಪುರ ನಾಡಿನಲ್ಲಿ ಕಟ್ಟಿದ ಕಲ್ಯಾಣ ಪರಂಪರೆಯನ್ನು ಅಧ್ಯಯನ ಮಾಡುವ ಮೂಲಕ ಬೀದರ್, ಗುಲಬರ್ಗಾ ಮತ್ತು ರಾಯಚೂರು ಭಾಗದ ಕರ್ನಾಟಕವನ್ನು "ಕಲ್ಯಾಣ ಕರ್ನಾಟಕವೆಂದು" ಕರೆಯುವುದು ಹೆಚ್ಚು ಸಮಂಜಸ ಎಂಬುದನ್ನು ಈ ಕಿರುಪ್ರಬಂಧದ ಮೂಲಕ ಹೇಳಿದರೆ ಯಾವುದೇ ಅಡ್ಡಿಯಾಗದು.

* * *


ದಂಡಗುಂಡದ ಸಂಗಮನಾಥನ ಗದ್ದುಗೆ


ದಂಡಗುಂಡ ಬಸವೇಶ್ವರ ದೇವಾಲಯದ ಮುಂಭಾಗ



ದಂಡಗುಂಡದ ಸಂಗಮನಾಥನ ಗದ್ದುಗೆ



ದಂಡಗುಂಡ ಬಸವೇಶ್ವರ ದೇವಾಲಯದ ಮುಂಭಾಗ



ದಂಡಗುಂಡ ಸಂಗಮನಾಥ ದೇವಾಲಯ ಮುಂಭಾಗ



ಧರ್ಮಕಲ್ಯಾಣದ ನಾಗವೇಲಾಂಬಿಕೆ



ನಾಗವೇಲಾಂಬಿಕೆ ದೇವಾಲಯದ ಮುಂಭಾಗ



ಧರ್ಮಕಲ್ಯಾಣದ ಪರಿಸರ



ತ್ರೈಪುರುಷ ದೇವಾಲಯದ ಎದುರಿನ ಕ್ರಿ.ಶ.೧೦೫೮ ರ ಶಾಸನ



ತ್ರೈಪುರಷ ದೇವಾಲಯ (ಘಟಿಕಾಸ್ಥಾನ)



ನಂದೀಬಾವಿ



ಗುಂಡುರಾವ್ ದೇವಾಲಯ



ತ್ರೈಪುರುಷ ದೇವಾಲಯದ (ಘಟಿಕಾಸ್ಥಾನದ) ಒಳಾಂಗಣ



ನಂದೀಶ್ವರ ದೇವಾಲಯ


ಸಿದ್ದೇಶ್ವರ ದೇವಸ್ಥಾನದಲ್ಲಿರುವ ಕ್ರಿ.ಶ.೧೧೯೮ ರ ಶಾಸನ


ಸಿದ್ದೇಶ್ವರ ದೇವಸ್ಥಾನ (ಕಡ್ಲಿಬಸವಣ್ಣ)



ಸಿದ್ಧೇಶ್ವರ ದೇವಾಲಯ (ಕಡ್ಲಿಬಸವೇಶ್ವರ)



ಕಾಳಿಕಾದೇವಿ ದೇವಾಲಯ



ಕಾಳಿಕಾಂಬೆ ದೇವಾಲಯದ ಬಾವಿ



ತಿಪ್ಪಣ್ಣ ಮತ್ತು ಗುಂಡಬಸವೇಶ್ವರ ಗದ್ದುಗೆ


ತಿಪ್ಪಣ್ಣಯ್ಯನ ಗದ್ದುಗೆ


ಗುಂಡಬಸವಣ್ಣನ ಗದ್ದುಗೆ



ಈರಪ್ಪಯ್ಯ ಗದ್ದುಗೆಯ ಮುಂದಿನ ಅತಿಥಿಶಾಲೆ



ಆಂಜನೇಯ ದೇವಾಲಯ



ಕಂಗಳೇಶ್ವರ ದೇವಾಲಯ, ಚಿತ್ತಾಪುರ



ಗುಂಡಬಸವನ ಹೆಂಡತಿಯ ಊರು ಗುಂಡಗುರ್ತಿಯಲ್ಲಿನ ನಾಗರ ಕಲ್ಲುಗಳು



ಗುಂಡಬಸವ ಹೆಂಡತಿ ಜಕ್ಕಮ್ಮ  ಮತ್ತು ಮಗ ಅಲ್ಲಮಪ್ರಭುವಿನ ಗದ್ದುಗೆ, ಕಕ್ಕಳಮೇಲಿ



ಅಲ್ಲಮಪ್ರಭುವಿನ ಪಕ್ಕದಲ್ಲಿ ಶಿಷ್ಯ-ಪ್ರಶಿಷ್ಯರ ಗದ್ದುಗೆ, ಕಕ್ಕಳಮೇಲಿ



ಸಾಲೋಟಗಿ ಶಿವಯೋಗಿ ದೇವಾಲಯದ ಮುಂಭಾಗ



ಸಾಲೋಟಗಿ ಶಿವಯೋಗಿ ದೇವಾಲಯದ ಒಳಭಾಗ

## ೨. ವಕ್ತೃವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು |
| --- | --- | --- | --- | --- |
| ೧. | ಶಾಂತಪ್ಪ ಬಾಗೂರ | ೬೦ | ಕೃಷಿ | ನಾಗಾವಿ |
| ೨. | ಮಲ್ಲಪ್ಪ ಮಾಗೂರು | ೭೦ | ಕೃಷಿ | ಸಾಲೋಟಗಿ |
| ೩. | ಶರಣಯ್ಯಸ್ವಾಮಿ ಮಠಪತಿ | ೬೫ | ಅರ್ಚಕ | ಸಾಲೋಟಗಿ |
| ೪. | ಪ್ರಭು ಬ ಪೂಜಾರ | ೩೭ | ಅರ್ಚಕ | ಕೊಡೇಕಲ್ಲ |
| ೫. | ವಿದ್ಯಾನಂದ ಸ್ವಾಮಿಗಳು | ೩೦ | ಸ್ವಾಮಿಗಳು | ದಂಡಗುಂಡ |
| ೬. | ಶಿವಲಿಂಗಪ್ಪ ಹಳ್ಳಿ | ೭೫ | ವ್ಯವಸಾಯ | ಕಕ್ಕಳಮೇಲಿ |
| ೭. | ಹಜರತ್ ಕಾವಲಿ | ೬೦ | ವ್ಯಾಪಾರ | ಕಕ್ಕಳಮೇಲಿ |
| ೮. | ಡಾ.ಮಲ್ಲಿಕಾರ್ಜುನ ಬಾಗೋಡಿ | ೪೦ | ಉಪನ್ಯಾಸಕರು | ಚಿತ್ತಾಪುರ |

## ೩. ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ, (ಸಂ), ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೨. ಅಮರೇಶ ನುಗಡೋಣಿ, ಹೈದರಾಬಾದು ಕರ್ನಾಟಕ ಹಾಡು ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೩. ಅಶೋಕ ನರೋಡೆ ಮತ್ತು ವಿಜಯಕುಮಾರ ಕಟಗಿಹಳ್ಳಿಮಠ, (ಸಂ), ನಿರುಪಾಧಿ ಅಭಿನಂದನ ಗ್ರಂಥ, ಪ್ರಕಾಶಕರು ೨: ಮರೆಗುದ್ದಿಯ ಪೂಜ್ಯ ಶ್ರೀ ನಿರುಪಾಧೀಶ ಮಹಾಸ್ವಾಮಿಗಳ ಅಭಿನಂದನ ಸಮಿತಿ, ಮುಧೋಳ, ೨೦೦೭

೪. ಇರಸಂಗಯ್ಯ ಜಿ., ಕೊಡೇಕಲ್ ಮಠ, (ಸಂ), ನಂದಿಯಾಗಮಲೀಲೆ, ಪ್ರಕಾಶಕರು, ಶ್ರೀ ಕೊಡೇಕಲ್ಲ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್ಲ, ೨೦೦೫

೫. ಉಮಾಪತಿಶಾಸ್ತ್ರಿ ಗೌ.ಮ., ಶ್ರೀ ಕೊಟ್ಟೂರು ಸ್ವಾಮಿಗಳ ಗುರುಪರಂಪರೆ, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹೊಸಪೇಟೆ, ೧೯೮೩

೬. ಕಲಬುರ್ಗಿ ಎಂ.ಎಂ., ಮಾರ್ಗ ಮತ್ತು ಸಂಗಪ್ಪಯ್ಯಸ್ವಾಮಿ (ಸಂ), ಗುಂಡಬಸವೇಶ್ವರ ಚರಿತ್ರೆ, ಕರ್ನಾಟಕ ರಾಜ್ಯದ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭

೭. ಕಲಬುರ್ಗಿ ಎಂ.ಎಂ., ಮಾರ್ಗ–೨, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೫

೮. ಕಲಬುರ್ಗಿ ಎಂ.ಎಂ., ಮಾರ್ಗ–೩, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೫

೯. ಕಲಬುರ್ಗಿ ಎಂ.ಎಂ., ಮಾರ್ಗ–೪, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

೧೦. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ಸಿರಿಗನ್ನಡ ಪ್ರಕಾಶನ, ಕನ್ನಡ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೦

೧೧. ಕಲಬುರ್ಗಿ ಎಂ.ಎಂ., (ಸಂ), ಹರಿಹರನ ರಗಳೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೮

೧೨. ಕಲಬುರ್ಗಿ ಎಂ.ಎಂ., (ಸಂ), ಬಸವಣ್ಣನವರ ವಚನ ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩

೧೩. ಕೊಟ್ರಯ್ಯ ಸಿ.ಟಿ.ಎ., ಹಂಪಿ, ಶ್ರೀಶರಣರ ಸುವಾಸಿನಿ ಬಳಗ, ಹೊಸಪೇಟೆ, ೧೯೯೭

೧೪. ಕೊಪ್ಪಳ ವಿ.ಆರ್., (ಪ್ರ), ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆ, ಧಾರವಾಡ, ೧೯೩೪

೧೫. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ವೀರಶೈವ ಪಂಚಪೀಠ ಪರಂಪರೆ, ಶ್ರೀಸದ್ಧರ್ಮ ಸಿಂಹಾಸನ, ಜ್ಞಾನಗುರು ವಿದ್ಯಾಪೀಠ ಉಜ್ಜಯನಿ, ೨೦೦೧

೧೬. ಚಿದಾನಂದಮೂರ್ತಿ ಎಂ., ಸ್ಥಾವರ-ಜಗಮ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫

೧೭. ದೇಜಗೌ., ಶ್ರೀಬಸವೇಶ್ವರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫

೧೮. ನಾಗರಾಜ್ ಎಂ.ಜಿ., ಸಾಂಸ್ಕೃತಿಕ ವೀರಭದ್ರಸ್ವಾಮಿ, ಶ್ರೀಮದ್ವೀರಶೈವ ಸದ್ಬೋಧನಾ ಸಂಸ್ಥೆ ಶ್ರೀಮದ್ರಂಭಾಪುರಿ ವೀರಸಿಂಹಾಸನ ಮಹಾಪೀಠ, ಬಾಳೆಹೊನ್ನೂರು.

೧೯. ಪಾಟೀಲ ಬಿ.ಎಸ್., ವೀರಶೈವ ದರ್ಶನಸಾರ, ಶ್ರೀ ಜ.ಗಂಗಾಧರ ಧರ್ಮಪ್ರಚಾರಕ ಮಂಡಳಿ, ಮೂರು ಸಾವಿರಮಠ ಹುಬ್ಬಳ್ಳಿ, ೧೯೮೭

೨೦. ಪ್ರೇಮಾದೇವಿ ಮಳಿಮಠ, (ಅನುವಾದ), ವೀರಶೈವ ಧರ್ಮದ ಕೈಪಿಡಿ, ಶ್ರೀಬಸವೇಶ್ವರ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

೨೧. ಬಸವಲಿಂಗ ಸೊಪ್ಪಿಮಠ, ಕೊಡೇಕಲ್ಲ ಬಸವಣ್ಣ : ಒಂದು ಅಧ್ಯಯನ, ಕೊಡೇಕಲ್ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್ಲು, ೧೯೯೫

೨೨. ಬಸವಲಿಂಗ ಸೊಪ್ಪಿಮಠ, (ಸಂ), ಕೊಡೇಕಲ್ಲ ವಚನವಾಕ್ಯ ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೮

೨೩. ಭೂಸನೂರಮಠ ಸಂ.ಶಿ., (ಸಂ), ವಿಜಯ ಕಲ್ಯಾಣ, ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ, ಶ್ರೀ.ಜ. ಕೊಟ್ಟೂರುಸ್ವಾಮಿ ಮಠ, ಹಂಪಿ, ೧೯೮೮

೨೪. ಭೂಸನೂರಮಠ ಸಂ.ಶಿ., (ಸಂ), ಕಲ್ಮಠದ ಪ್ರಭುದೇವರು ವಿರಚಿಸಿದ ಲಿಂಗಲೀಲಾ ವಿಲಾಸ ಚಾರಿತ್ರ್ಯ ಮುರುಘಾಮಠ, ಧಾರವಾಡ, ೧೯೭೭

೨೫. ಭೂಸನೂರುಮಠ ಸಂ.ಶಿ., (ಸಂ), ವಚನ ಸಾಹಿತ್ಯ ಸಂಗ್ರಹ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೨೬. ಮಲ್ಲದ ಟಿ.ಎನ್., ವೀರಶೈವದ ಪ್ರಾಚೀನತೆ, ಪಿ. ಮಹಾದೇವಯ್ಯ ಪ್ರಕಾಶನ, ಬೆಂಗಳೂರು, ೧೯೬೮

೨೭. ಮಲ್ಲಾಪುರ ಬಿ.ವಿ., ಚೆನ್ನಬಸವಣ್ಣನವರ ವಚನಗಳು, ಸಂಪುಟ-೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩

೨೮. ಮಹಾದೇವ ಬಣಕಾರ, ವಿಶ್ವಬಂಧು ಮರುಳಸಿದ್ಧಕಾವ್ಯ, ಶ್ರೀ ತರಳಬಾಳು ಪ್ರಕಾಶನ, ಸಿರಿಗೆರೆ, ೧೯೮೯

೨೯. ಯಳನಾಡು ಅಂಜನಪ್ಪ, (ಸಂ), ಧರ್ಮ ಮತ್ತು ಮುಕ್ತ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೩೦. ರವೀಂದ್ರನಾಥ ಕೆ., (ಸಂ), ಬಸವಯುಗದ ವಚನೇತರ ಸಾಹಿತ್ಯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦

೩೧. ರವೀಂದ್ರನಾಥ ಕೆ., (ಸಂ), ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ ವಿಮೋಚನೆ, ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಸೊಂಡೂರು, ೨೦೦೫

೩೨. ರವೀಂದ್ರನಾಥ ಕೆ., ಅಗ್ನಿದಿವ್ಯ, ಸುರಚಿರ ಪ್ರಕಾಶನ, ಗುಲಬರ್ಗಾ, ೨೦೦೬

೩೩. ರಹಮತ್ ತರೀಕೆರೆ, ಕರ್ನಾಟಕದ ನಾಥಪಂಥ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫

೩೪. ರಾಮಯ್ಯಂಗಾರ್ ಎಚ್. ಜೆ., ಶೈವಧರ್ಮ ದರ್ಶನ, ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್‌ಸನ್ಸ್, ಬೆಂಗಳೂರು, ೧೯೮೧

೩೫. ವಿದ್ಯಾಶಂಕರ್ ಎಸ್., (ಗದ್ಯಾನುವಾದ)., ಚಾಮರಸನ ಪ್ರಭುಲಿಂಗಲೀಲೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೩೬. ವಿದ್ಯಾಶಂಕರ ಎಸ್., (ಸಂ), ನಿಜಗುಣರ ಸಮಗ್ರ ಕೃತಿಗಳು, ಭಾಗ-೧ ಪ್ರಿಯದರ್ಶಿನಿ ಪ್ರಕಾಶನ, ಹಂಪಿನಗರ ಬೆಂಗಳೂರು, ೧೯೯೫

೩೭. ವಾಲಿ ಎಂ.ಎಸ್., (ಸಂ), ಸಾಲೋಟಗಿ ಶಿವಯೋಗೀಶ್ವರರ ಡಂಗುರ ಪದಗಳು, ವೀರಶೈವ ಅಧ್ಯಯನ ಸಂಸ್ಥೆ ಗದಗ, ೧೯೮೨

೩೮. ಶಿವಮೂರ್ತಿ ಬಿ., (ಸಂ), ವೀರೇಶ ಚರಿತೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

೩೯. ಶಿವಮೂರ್ತಿ ಬಿ., (ಸಂ), ಚಂದ್ರಕವಿಯ ಪಂಪಾಸ್ಥಾನ ವರ್ಣನಂ, ಶರಣಸಾಹಿತ್ಯ ಕಾರ್ಯಾಲಯ, ಬೆಂಗಳೂರು, ೧೯೫೫

೪೦. ಶಿವಾನಂದ ಎಸ್. ವಿರಕ್ತಮಠ, (ಸಂ), ವಚನ-ಸ್ವರವಚನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦

೪೧. ಶಿವಾನಂದ ಎಸ್. ವಿರಕ್ತಮಠ, ಅಮರಕಲ್ಯಾಣ, ನುಡಿಪ್ರಕಾಶನ, ಹೊಸಪೇಟೆ, ೨೦೦೫

೪೨. ಸುಂಕಾಪುರ ಎಂ.ಎಸ್., (ಪ್ರ.ಸಂ), ವೀರಶೈವಧರ್ಮ, ತತ್ವಸಿದ್ಧಾಂತ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭

೪೩. ಹಳಕಟ್ಟಿ ಫ.ಗು., (ಸಂ), ವಚನಶಾಸ್ತ್ರಸಾರ ಭಾಗ-೨, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜ. ತೋಂಟದಾರ್ಯ ಸಂಸ್ಥಾನ ಮಠ, ಗದಗ, ೧೯೯೯

೪೪. ಹನುಮಾಕ್ಷಿ ಗೋಗಿ, (ಸಂ), ಗುಲ್ಬರ್ಗಾ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ ನವನಗರ, ಹುಬ್ಬಳ್ಳಿ, ೧೯೯೯

೪೫. ಹಿರೇಮಠ ಆರ್.ಸಿ., (ಸಂ), ವೀರಶೈವಾಮೃತ ಪುರಾಣ, ಭಾಗ-೨, ಎಸ್. ಎಸ್. ಎಸ್ ಕಲ್ಯಾಣ ಕೇಂದ್ರ, ಬೆಂಗಳೂರು, ೧೯೭೦

೪೬. ಹಿರೇಮಠ ಆರ್.ಸಿ., ಮಹಾಯಾತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೮

೪೭. ಹಿರೇಮಠ ಆರ್.ಸಿ., (ಸಂ) ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆ, ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೨

೪೮. ಹೆಚ್. ಎಸ್. ಮೇಲಿ ಮನಿ ಮತ್ತು ಎಸ್.ಎಸ್.ಭಗವತಿ, (ಸಂ), ಕನ್ನಡ ಶಾಸನಗಳ ಅಧ್ಯಯನ

* * *

